ಓಂ

ಶ್ರೀ ಜಗದಂಬಾ ರೇಣುಕಾ ದೇವ್ಯೈ ನಮಃ







ಶ್ರೀ ವೇದವ್ಯಾಸೋಕ್ತ-

ಸ್ಕಂದ ಮಹಾಪುರಾಣ—ಸಹ್ಯಾದ್ರಿಖಂಡಾಂತರ್ಗತ

# ಶ್ರೀ ರೇಣುಕಾ ಮಹಾತ್ಮೆ

ಅಥವಾ



# ಎಲ್ಲಮ್ಮದೇವಿಯ ಪುರಾಣವು

ಪ್ರಕಾಶಕರು :

ಶ್ರೀ ಎಲ್ಲಮ್ಮದೇವಿ ಪೂಜಾರರು

ಶಿವನಗೌಡಾ ಪರಶುರಾಮಗೌಡಾ ರೇಣಕಿಗೌಡ್ರ ವ

ವಿಶ್ವನಾಥಗೌಡಾ ಗೋವಿಂದಗೌಡಾ ರೇಣಕಿಗೌಡ್ರ (ಗೂಡಖುಷಿ),

ಉಗರಗೊಳ್ಳ, ತಾ. ಸವದತ್ತಿ.

೧೯೫೮ ಇಸ್ವಿ. ಬೆಲೆ: ೨ ರೂ. ೫೦ ನ ಪೈಸೆ.

ಶ್ರೀ ರೇಣುಕಾ ದೇವ್ಯೈ ನಮಃ

ಸ್ಕಂದ ಮಹಾಪುರಾಣ ಸಹ್ಯಾದ್ರಿಖಂಡಾಂತರ್ಗತ

# ಶ್ರೀ ರೇಣುಕಾ ಮಹಾತ್ಮ್ಯ

ಎಂಬ

ಶ್ರೀ ವ್ಯಾಸೋಕ್ತ

# ಶ್ರೀ ಎಲ್ಲಮ್ಮ ದೇವಿಯ ಪುರಾಣವು

ಪ್ರೋತ್ಸಾಹಿಸಿದರು.—

**ಗೋವಿಂದಗೌಡ್ರು ಪರಶುರಾಮಗೌಡ್ರು (ಗೂಡ[illegible])**

**ರೇಣುಕಿಗೌಡ್ರು**

ಶ್ರೀ ಜಗದಾಚಾರ್ಯ ತರ್ಕತೀರ್ಥ ನೀಲಕಂಠ ಶಿವಾಚಾರ್ಯ

ಮಹಾಸ್ವಾಮಿಗಳು ಬರೆದ ಮುನ್ನುಡಿಯಿಂದ ಯುಕ್ತವಾಗಿರುವದು.


ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸಿದವರು:

**ಪಂಡಿತ ರುದ್ರಮುನಿಸ್ವಾಮಿಗಳು, ಬೆಡಸೂರಮಠ**



೧೯೫೮ ಬೆಲೆ. ೨ ರೂ, ೫೦ ನ. ಪೈಸೆ

ಪ್ರಕಾಶಕರು :
ಶಿವನಗೌಡ ಪರಸನಗೌಡ ರೇಣಕಿಗೌಡರ (ಗೂಡಮಕಿ)
ಮತ್ತು
ವಿಶ್ವನಾಥಗೌಡ ಗೋವಿಂದಗೌಡ ರೇಣಕಿಗೌಡರ
ಶ್ರೀ ರೇಣುಕಾ ದೇವಸ್ಥಾನ (ಎಲ್ಲಮ್ಮನಗುಡ್ಡ) ಉಗರಗೋಳ, ತಾ. ಸವದತ್ತಿ



ಮುದ್ರಕರು :
ಆರ್. ಜಿ. ಹೆಗಡಾಳ, ಆನಂದ ಪ್ರಿಂಟಿಂಗ್ ಪ್ರೆಸ್ ಹುಬ್ಬಳ್ಳಿ.



ಶ್ರೀ ಜಗದಂಬಾ ರೇಣುಕಾ (ಎಲ್ಲಮ್ಮ) ದೇವಿ

ಮೈಸೂರಿನ ಶ್ರೀಮಾನ್ ಮಹಾರಾಜರು ದೇವಿಯ ದರ್ಶನಕ್ಕೆ ಬಂದಾಗ ಜರುಗಿದ ದೇವಿಯ ಮಹಾಪೂಜೆಯ ಭಾವಚಿತ್ರ.



ಶ್ರೀ ರೇಣುಕಾದೇವಿಯ ಪೂಜಾರರು
ಸದ್ಧರ್ಮಶೀಲರೂ ಶಿವಪೂಜಾವಿಲೋಲರೂ ಆದ
ಶ್ರೀ ಗೋವಿಂದಗೌಡರು ಪರಶುರಾಮಗೌಡರು ತೇಣಿಕಿಗೌಡರ (ಗೂಡವಿಸುಕಿ)
ಉ ಗ ರ ಗೋ ಳ
(ಮರಣ ತಾ. ೨೨—೮—೧೯೨೪.)

॥ಶ್ರೀ ಜಗದಂಬಾಯೈ ನಮಃ॥

# ಪ್ರಸ್ತಾವನೆಯು

ಪುಣ್ಯಕ್ಷೇತ್ರಗಳ ನೆಲೆವೀಡಾದ ನಮ್ಮ ಕರ್ನಾಟಕ ದೇಶದಲ್ಲಿ ಪ್ರಸಿದ್ಧವೂ ಪವಿತ್ರವೂ ಮತ್ತು ಅತೀ ಪ್ರಾಚೀನವೂ ಆದ ಶ್ರೀ ರೇಣುಕಾಕ್ಷೇತ್ರ (ಎಲ್ಲಮ್ಮನ ಗುಡ್ಡ)ದ ಸೊಬಗನ್ನು ನೋಡದೆ ಇದ್ದ ಈ ರಮ್ಯವಾದ ಪವಿತ್ರ ಕ್ಷೇತ್ರದ ಹೆಸರನ್ನು ಕೇಳದ ಇದ್ದ ಕನ್ನಡಿಗರೇ ಇಲ್ಲೆಂದು ಹೇಳಬಹುದು. ಇಂಥ ಪವಿತ್ರ ಕ್ಷೇತ್ರದಲ್ಲಿ ನೆಲಸಿ ಕರ್ನಾಟಕ ದೇಶವನ್ನು ಪಾವನಮಾಡಿದ ಶ್ರೀ ರೇಣುಕಾದೇವಿಯ ಮಹಾತ್ಮೆಯನ್ನು ಶ್ರೀ ವೇದವ್ಯಾಸ ಮಹರ್ಷಿಗಳು ಸ್ಕಂದ ಮಹಾಪುರಾಣಾಂತರ್ಗತ ಸಹ್ಯಾದ್ರಿಖಂಡದಲ್ಲಿ ನಾಲ್ವತ್ತು ಅಧ್ಯಾಯಗಳಿಂದ ವರ್ಣಿಸಿದ್ದು, ಅದನ್ನು ಇಲ್ಲಿಯ ವರೆಗೆ ಮುದ್ರಿಸಿ ಪ್ರಕಾಶಮಾಡದೆ ಇದ್ದದ್ದು ಶ್ರೀ ರೇಣುಕಾದೇವಿಯ ಪೂಜಾರಿ ವರ್ಗಕ್ಕೂ, ಭಕ್ತವೃಂದಕ್ಕೂ ಲಾಂಛನಾಸ್ಪದವಾದ ವಿಷಯವಾಗಿದೆ. ಇದನ್ನರಿತು ಮುನ್ನಡಿಕಾರರಾದ, ತರ್ಕತೀರ್ಥ ವೇದಾಂತವಿಶಾರದ, ಸಾಂಖ್ಯಾಲಂಕಾರ, ನ್ಯಾಯವಾಚಸ್ಪತಿ, ಸಂಸ್ಕೃತಸಾಹಿತ್ಯವಿಶಾರದ ಇತ್ಯಾದಿ ಬಿರುದಾಂಕಿತರೂ ಮಂತ್ರತಂತ್ರಸಿದ್ಧರೂ ಉಪಯೋಗಸಿದ್ಧರೂ ಆದ ಹೂಲಿ ಸಿಂಹಾಸನ ಬ್ರಹನ್ಮಠಾಧ್ಯಕ್ಷ ಶ್ರೀ ಜಗದಾಚಾರ್ಯ ನೀಲಕಂಠ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಕಾಶೀಕ್ಷೇತ್ರದಲ್ಲಿ ಸಂಸ್ಕೃತ ಅಧ್ಯಯನ ಮಾಡುವ ಸಮಯದಲ್ಲಿ ನಮ ತೀರ್ಥಸ್ವರೂಪರೂ, ಸದಾಚಾರಸಂಪನ್ನರೂ, ಗುರುದೇವತಾ ಭಕ್ತಿತತ್ಪರರೂ ಆದ ಗೋವಿಂದ ಗೌಡರು ರೇಣಕಿಗೌಡರು ಇವರು ಶ್ರೀ ರೇಣುಕಾದೇವಿಯ ಚರಿತ್ರದ ವಿಷಯಕ್ಕೆ ವಿಚಾರಮಾಡಲು ಸದರಿ ಮಹಾಸ್ವಾಮಿಗಳವರು ಸ್ಕಂದ ಪುರಾಣಾಂತರ್ಗತ ಸಹ್ಯಾದ್ರಿಖಂಡದಲ್ಲಿ ಶ್ರೀ ರೇಣುಕಾಮಹಾತ್ಮ್ಯವು ಸವಿಸ್ತಾರವಾಗಿ ರಚಿಸಲ್ಪಟ್ಟಿದೆ ಎಂದೂ, ಅದನ್ನು ಕನ್ನಡಭಾಷೆಯಲ್ಲಿ ಅನುವಾದ ಮಾಡಿಸಿ ಶ್ರೀ ಎಲ್ಲಮ್ಮನ ಪುರಾಣರೂಪದಿಂದ ಮುದ್ರಿಸಿ ಪ್ರಕಟಪಡಿಸಬೇಕೆಂದೂ ಅಪ್ಪಣೆ ಕೊಡಿಸಿ ಸನ್ ೧೮೭೭ನೇ ಫೆಬ್ರುವರಿ ತಿಂಗಳಲ್ಲಿ ಮುಂಬಯಿಯಲ್ಲಿ ಓರ್ವ ಧರ್ಮಧುರಂಧರರಿಂದ ಮುದ್ರಿಸಿದ ಸಹ್ಯಾದ್ರಿಖಂಡವನ್ನು ತರಿಸಿಕೊಟ್ಟರು. ೮೦ ವರ್ಷಗಳ ಪೂರ್ವದಲ್ಲಿ ಸಂಸ್ಕೃತಾಕ್ಷರದಲ್ಲಿ

ಮುದ್ರಿಸಿ ಪ್ರಕಟಿಸಲ್ಪಟ್ಟ ಸಹ್ಯಾದ್ರಿಖಂಡಾಂತರ್ಗತ ಶ್ರೀ ರೇಣುಕಾ ಮಹಾತ್ಮ್ಯೆಯನ್ನು ನಮ್ಮ ತೀರ್ಥಸ್ವರೂಪ ಗೋವಿಂದಗೌಡರು ರೇಣಕಿ ಗೌಡರು ಇವರು ಸವದತ್ತಿ ಬೆಡಸೂರಮಠದ ವೇ| ರುದ್ರಯ್ಯ ಸ್ವಾಮಿಗಳಿಂದ ಕನ್ನಡದಲ್ಲಿ ಭಾಷಾಂತರಿಸಿದರು. ಪರಂತು ಅವರ ಜೀವಮಾನದಲ್ಲಿ ಅದನ್ನು ಮುದ್ರಿಸಿ ಪ್ರಕಾಶಪಡಿಸುವ ಸತ್ಯಸಂಕಲ್ಪವು ಈಡೇರಲಿಲ್ಲ. ಇದನ್ನರಿತು, ಅವರ ಸತ್ಯಸಂಕಲ್ಪವನ್ನು ಪೂರ್ತಿಗೊಳಿಸುವದಕ್ಕಾಗಿ, ಸರ್ವ ಕನ್ನಡಬಾಂಧವ ರಿಗೆ ಶ್ರೀ ರೇಣುಕಾದೇವಿಯ ಮಹಾತ್ಮ್ಯವನ್ನು ತಿಳಿಸಿಕೊಡುವದಕ್ಕಾಗಿ ಕನ್ನಡ ಭಾಷಾಂತರವನ್ನಷ್ಟೇ ಈಗ ಮುದ್ರಿಸಿ ಪ್ರಕಾಶಪಡಿಸಿದ್ದೇವೆ. ಇದರಲ್ಲಿ ಸಂದರ್ಭಾನುಸಾರವಾಗಿ ಶ್ರೀ ದೇವಿಯ ಚಿತ್ರಗಳನ್ನು ಪ್ರಕಾಶಪಡಿಸಿದ್ದೇವೆ. ಶ್ರೀದೇವಿಭಕ್ತರೂ, ಕನ್ನಡಬಾಂಧವರೂ ನಮ್ಮ ಅಲ್ಪ ಸೇವೆಯನ್ನು ಅಂಗೀ ಕರಿಸಿ, ದೇವತಾಭಕ್ತಿತತ್ಪರರಾಗಬೇಕೆಂದು ಆಶಿಸುತ್ತೇವೆ.

ಈ ಮೊದಲು ಶ್ರೀ ರೇಣುಕಾದೇವಿಯ (ಎಲ್ಲಮ್ಮದೇವಿಯ) ವಿಷಯ ವಾಗಿ ಹಲವಾರು ಪುಸ್ತಕಗಳು ಮುದ್ರಿಸಿ ಪ್ರಕಟಿಸಲ್ಪಟ್ಟಿವೆ, ಮತ್ತು ಶ್ರೀ ರೇಣುಕಾದೇವಿಯ ಪಂಚಕಮಿಟಿಯವರು ಹೂಲಿ ಹಿರೇಮಠದ ಪಂಚಾಂಗಕರ್ತರಾದ ಶ್ರೀ ಸಿದ್ಧಾಂತಿ ಶಿವಬಸವ ಶಾಸ್ತ್ರಿಗಳಿಂದ ಬರೆಯಿಸಿ ಶ್ರೀ ರೇಣುಕಾದೇವಿಯ ಮಹಾತ್ಮೆಯನ್ನು ಪ್ರಕಾಶಪಡಿಸಿದ್ದಾರೆ. ಅದೆಲ್ಲ ಪುಸ್ತಕಗಳು ಒಂದಕ್ಕೊಂದು ವಿರೋಧ ವಿಷಯಗಳಿಂದಲೂ, ಕೆಲವು ಪ್ರಕ್ಷಿಪ್ತ ವಿಷಯಗಳಿಂದಲೂ, ಓದುಗರಿಗೆ ಅತ್ಯಂತ ಅಸಮಂಜಸವಾಗಿ ತೋರುತ್ತವೆ. ಇಂಥ ಪುಸ್ತಕಗಳನ್ನು ಓದುವದರಿಂದ ಶ್ರೀ ರೇಣುಕಾದೇವಿಯ ವಿಷಯವಾಗಿ ಭಯಭಕ್ತಿಗಳು ಹುಟ್ಟುವ ಬದಲು ಜುಗುಪ್ಸೆಯು ಉತ್ಪನ್ನವಾಗುವದು· ಶ್ರೀ ರೇಣುಕಾದೇವಿಯೂ, ಶ್ರೀ ಜಮದಗ್ನಿಮಹರ್ಷಿಯೂ, ಶ್ರೀ ಪರಶು ರಾಮದೇವರೂ ಈ ಪವಿತ್ರವಾದ ರಾಮಶೃಂಗ ಪರ್ವತದ ಶ್ರೀ ದತ್ತಾತ್ರೇಯ ಆಶ್ರಮದಲ್ಲಿ ನೆಲಸಿದ ಮೇಲೆ, ಕೆಲವು ಘಟನೆಗಳು ಸಂಭವಿಸಿರಬಹುದು. ಅವುಗಳಲ್ಲಿ ಸಮುದ್ರವನ್ನು ಹಿಂದಕ್ಕೆ ಸರಿಸಿ, ಆ ಭೂಮಿಯನ್ನು ಉತ್ತರ ಪ್ರದೇಶದ ಗೌಡಸಾರಸ್ವತ ಬ್ರಾಹ್ಮಣರಿಗೆ ದಾನಮಾಡಿ, ಆ ಬ್ರಾಹ್ಮಣವರ್ಗವನ್ನು ಸಹ್ಯಾದ್ರಿ ಮತ್ತು ಸಮುದ್ರದ ಮಧ್ಯಪ್ರದೇಶವಾದ ಕೊಂಕಣದಲ್ಲಿ ಶ್ರೀ ಪರಶುರಾಮದೇವರು ತಂದಿರಿಸಿದ ವಿಷಯವೂ, ಶ್ರೀ ಜಮದಗ್ನಿ ಮಹರ್ಷಿ ಯಿಂದ ಪುನಃ ಶಾಪಾಸಕ್ತಳಾಗಿ ಕುಷ್ಟರೋಗಪೀಡಿತಳಾಗಿ, ಶ್ರೀ ರೇಣುಕೆಯು

ಏಕನಾಥ ಜೋಗಿನಾಥರೆಂಬ ಶಿವಯೋಗಿಗಳ ಕೃಪೆಗೆ ಪಾತ್ರಳಾದ ವಿಷಯವೂ ಸಹ್ಯಾದ್ರಿಖಂಡದಲ್ಲಿ ವೇದವ್ಯಾಸರಿಂದ ವರ್ಣಿಸಲ್ಪಟ್ಟಿಲ್ಲ. ಯಾವದೋ ಒಂದು ಸ್ವಲ್ಪ ತಪ್ಪಿಗಾಗಿ ಆಶ್ರಮಧರ್ಮ ಬಹಿಷ್ಕೃತಳಾಗಿ, ಏಕನಾಥ ಜೋಗಿನಾಥ ಶಿವಯೋಗಿಗಳ ನೆರವಿನಿಂದ ಪುನಃ ಶ್ರೀ ಜಮದಗ್ನಿ ಮಹರ್ಷಿಯ ಅನುಗ್ರಹಕ್ಕೆ ಪಾತ್ರಳಾದದ್ದಷ್ಟೇ ಶ್ರೀ ರೇಣುಕಾದೇವಿಯ ಇತ್ತೀಚೆಗೆ ಸಂಭವಿಸಿದ ಘಟನೆಯಾಗಿದೆಯಲ್ಲದೆ, ಕುಷ್ಠರೋಗದ ಅಸಹ್ಯವೇದನೆಯ ವಿಷಯವಲ್ಲ. ಕೋಪವನ್ನು ತ್ಯಜಿಸಿದ ಶ್ರೀ ಜಮದಗ್ನಿಮಹರ್ಷಿಯು ತನ್ನ ಪ್ರಾಣಪ್ರಿಯಳಾದ ಶ್ರೀ ರೇಣುಕಾದೇವಿಗೆ ಪುನಃ ಪುನಃ ದುರ್ಘಟ ಶಾಪ ವನ್ನೀಯುವದು ಅಪ್ರಾಸಂಗವಿಷಯವಾಗಿದೆ. ಇಂಥ ವಿಷಯಗಳು ಪ್ರಕ್ಷಿಪ್ತ ವಿಷಯಗಳಲ್ಲದೆ ನಿಜವಾದ ವಿಷಯಗಳಲ್ಲ.

ನಾವೀಗ ಪ್ರಕಾಶಪಡಿಸಿದ ಸ್ಕಂದಮಹಾಪುರಾಣ ಸಹ್ಯಾದ್ರಿಖಂಡಾಂತ ರ್ಗತವಾದ ಶ್ರೀ ರೇಣುಕಾದೇವಿಯ ಮಹಾತ್ಮೆಯು ಪಂಡಿತಮಾನ್ಯ ವಾದದ್ದರಿಂದಲೇ ಪ್ರಸಿದ್ಧ ಪಂಡಿತರೂ, ಶಿವಯೋಗಿ ಶಿಖಾಮಣಿಗಳೂ ಪ್ರಾಚೀನಕಾಲದಿಂದಲೂ ಶ್ರೀ ರೇಣುಕಾಕ್ಷೇತ್ರದ ಸ್ಥಾನಾಚಾರ್ಯಪೀಠವಾದ ಹೂಲಿ ಸಿಂಹಾಸನ ಬೃಹನ್ಮಠಾಧ್ಯಕ್ಷರೂ ಆದ ಶ್ರೀ ಜಗದಾಚಾರ್ಯ ನೀಲ ಕಂಠಶಿವಾಚಾರ್ಯ ಮಹಾಸ್ವಾಮಿಗಳು ಕೃಪಾದೃಷ್ಟಿಯಿಂದ ಈ ಗ್ರಂಥ ಪ್ರಸಾರಕ್ಕೆ ಮುತ್ತಿನಂಥ ಮುನ್ನುಡಿಯನ್ನು ಬರೆದು ಶ್ರೀ ರೇಣುಕಾದೇವಿಯ ಮಹಿಮೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಅವರೀ ಕೃಪಾದೃಷ್ಟಿಗೆ ನಾವೆ ಲ್ಲರೂ ಉಪಕೃತರಾಗಿದ್ದೇವೆ.

ಈ ಪುಸ್ತಕಕ್ಕೆ ವ್ಯಾಸೋಕ್ತ ಎಲ್ಲಮ್ಮದೇವಿಯ ಪುರಾಣವೆಂದು ಹೆಸ ರಿಟ್ಟಿದ್ದೇವೆ. ಸ್ಕಂದಮಹಾಪುರಾಣೋಕ್ತವಾದ ಶ್ರೀ ರೇಣುಕಾದೇವಿಯ ಮಹಾತ್ಮೆಗೆ ಈ ಹೆಸರು ಅತ್ಯಂತ ಯೋಗ್ಯವಾಗಿದೆ. ಈ ನಿಜವಾದ ಸಂಗತಿ ಗಳಿಂದ ಕೂಡಿದ ಶ್ರೀ ರೇಣುಕಾದೇವಿಯ ಪುರಾಣವನ್ನು ಪ್ರತಿಯೊಬ್ಬ ಕನ್ನಡ ಬಾಂಧವನು ತರಿಸಿಕೊಂಡು, ದೇವಿಯ ಯಥಾರ್ಥ ವಿಷಯಗಳನ್ನು ಅರಿತು ಕೊಳ್ಳಬೇಕು. ಪಂಚಕಮಿಟಿಯವರೇ ಮೊದಲಾದವರು ಮುದ್ರಿಸಿದ ಶ್ರೀ ಎಲ್ಲಮ್ಮದೇವಿಯ ಯಾವದೇ ವಿಷಯವು ವಸ್ತುಸ್ಥಿತಿಗೆ ವಿರೋಧವಿದ್ದರೆ ಅದನ್ನು ಬಹಿಷ್ಕರಿಸುವದು ಪ್ರತಿಯೊಬ್ಬ ದೇಶಭಕ್ತನಿಗೂ, ಪೂಜಾರಿಗಳಿಗೂ ಅಧಿಕಾರವುಂಟು. ಸಾರ್ವಜನಿಕ ಹಣವನ್ನು ಯೋಗ್ಯರೀತಿಯಿಂದ ಪಂಚ

ಕಮಿಟಿಯವರು ವಿನಿಯೋಗಮಾಡಬೇಕಲ್ಲದೆ ಮನಸ್ಸಿಗೆ ಬಂದಂತೆ ವಿನಿಯೋಗಮಾಡಲಿಕ್ಕೆ ಬರಲಾರದು.

ಮುಂದಿನ ಮುದ್ರಣದಲ್ಲಿ ಸಂಸ್ಕೃತ ಭಾಗವನ್ನೂ, ಕನ್ನಡದ ಭಾಷಾಂತರ ಭಾಗವನ್ನೂ ಮುದ್ರಿಸಿ ಪ್ರಕಟಿಸುವೆವು, ಅಲ್ಲದೆ ಮಹಾರಾಷ್ಟ್ರ ಬಂಧುಗಳ ಪಾರಾಯಣಾದಿಗಳಿಗೆ ಉಪಯುಕ್ತವಾಗುವಂತೆ ಮಹಾರಾಷ್ಟ್ರ ಭಾಷಾನುವಾದ ಒಂದಲೂ ಮುದ್ರಿಸಿ ಪ್ರಕಟಿಸುತ್ತೇವೆ. ಅದಕ್ಕೆ ದೇವೀಭಕ್ತರು ಮತ್ತು ದೇವಿ ಪೂಜಾರಿಗಳು ನೆರವನ್ನೀಯುವರೆಂದು ನಂಬಿದ್ದೇವೆ.

ತಮ್ಮ

ಶಿವನಗೌಡ್ರು ಪರಸನಗೌಡ್ರು ರೇಣುಕಿಗೌಡ್ರು
ವಿಶ್ವನಾಥಗೌಡ್ರು ಗೋವಿಂದಗೌಡ್ರು ರೇಣುಕಿಗೌಡ್ರು

ದಿನಾಂಕ ೧೫ ಆಗಸ್ಟ ೧೯೫೭.

|| ಶ್ರೀ ಶಿವಃ ಶರಣಂ ||

# ಮುನ್ನುಡಿ

ಪುರಾಣ, ಪುಣ್ಯಕಥೆಗಳನ್ನು ಪ್ರಕಾಶಪಡಿಸುವ ಪವಿತ್ರಕರ್ತವ್ಯಪರಾಯಣರಿಗೆ ಸಹಾಯಮಾಡಿ ಪ್ರೋತ್ಸಾಹವನ್ನೀಯುವದು ಪ್ರತಿಯೊಬ್ಬ ಭಾರತೀಯನ ಪವಿತ್ರಕರ್ತವ್ಯವಾಗಿದೆ. ಧನಿಕರು ಧನದ ಸಹಾಯವನ್ನೀಯುವಂತೆ ಪಂಡಿತರು, ಲೇಖನ, ಕಥಾಸಾರ, ಮುನ್ನುಡಿಗಳನ್ನು ಬರೆದು ಪ್ರೋತ್ಸಾಹವನ್ನೀಯುವದು ಅವರ ಪಾಂಡಿತ್ಯದ ಸಹಾಯವೆಂದು ಹೇಳಬೇಕು. ಅವಿಮುಕ್ತಕ್ಷೇತ್ರ, ಪುಣ್ಯಕ್ಷೇತ್ರಗಳ ನೆಲೆವೀಡಾದ ನಮ್ಮ ಭಾರತದೇಶದಲ್ಲಿ ಶೈವ, ವೈಷ್ಣವ, ಶಾಕ್ತ, ಗಾಣಪತ, ಸೌರವೆಂಬ ವೈದಿಕಮತಾನುಯಾಯಿಗಳ ಪವಿತ್ರ ಕ್ಷೇತ್ರಗಳು ಹೇರಳವಾಗಿವೆ. ಆ ಪವಿತ್ರ ಕ್ಷೇತ್ರಗಳ, ಆ ಕ್ಷೇತ್ರಾಧಿಪತಿದೇವತೆಗಳ, ಆ ದೇವತೆಗಳ ಪರಮಭಕ್ತರ ಪ್ರಾಚೀನ ಚರಿತ್ರಗಳು ನಮ್ಮ ಭಾರತದೇಶದಲ್ಲಿ ಅಧಿಕವಾಗಿದ್ದಂತೆ ಇನ್ನಾವ ದೇಶಗಳಲ್ಲಿಲ್ಲ. ಇಂಥ ಪ್ರಾಚೀನ ಚರಿತ್ರೆಗಳಿಗೆ ಪುರಾಣಗಳೆಂಬ ಹೆಸರು ಅನ್ವರ್ಥವಾಗಿದೆ. ಪುರಾಣಗಳು ಅನೇಕವಾಗಿದ್ದು, ಅವೆಲ್ಲ ಪುರಾಣಗಳು ಶ್ರೀ ವೇದವ್ಯಾಸಮಹರ್ಷಿಗಳಿಂದ ರಚಿಸಲ್ಪಟ್ಟಿವೆ. ಅವುಗಳಲ್ಲಿ ಹದಿನೆಂಟು ಮಹಾಪುರಾಣಗಳು ಮುಖ್ಯವಾಗಿದ್ದು ಉಪಪುರಾಣಗಳು ಅನೇಕವಿರುತ್ತವೆ. ಮಹಾಪುರಾಣಗಳಲ್ಲಿ ಹತ್ತು ಶಿವಮಹಾತ್ಮ್ಯವನ್ನೂ ಶಿವಾಧಿಕ್ಯವನ್ನೂ ಹೇಳುವ ಪುರಾಣಗಳು, ನಾಲ್ಕು ವಿಷ್ಣುವಿನ ಮಹಾತ್ಮ್ಯವನ್ನೂ ವಿಷ್ಣ್ವಾಧಿಕ್ಯವನ್ನೂ ಹೇಳುವ ಪುರಾಣಗಳು, ಎರಡು ಶಕ್ತಿಯ ಮಹಾತ್ಮ್ಯವನ್ನೂ ಶಕ್ತಿಯ ಆಧಿಕ್ಯವನ್ನೂ ಹೇಳುವ ಪುರಾಣಗಳು, ಒಂದು ಗಣಪತಿಯ, ಮತ್ತೊಂದು ಸೂರ್ಯನ ಮಹಾತ್ಮ್ಯವನ್ನೂ ಹೇಳುವ ಪುರಾಣಗಳಾಗಿವೆ. "ಭಿನ್ನರುಚಿರ್ಹಿಲೋಕಃ" ಎಂಬ ಅಭಿಯುಕ್ತವಾಕ್ಯದಂತೆ ಆಯಾ ದೇವಭಕ್ತರ ಭಕ್ತಿಸ್ಥಿರತೆಗಾಗಿ ಆಯಾ ದೇವತೆಗಳ ಮಹಾತ್ಮ್ಯೆಯನ್ನೂ ಆಧಿಕ್ಯವನ್ನೂ ಭಿನ್ನ ಭಿನ್ನ ಪುರಾಣಗ್ರಂಥಗಳ ರೂಪದಿಂದ ವೇದವ್ಯಾಸರು ಉಪದೇಶ ಮಾಡಿರುತ್ತಾರೆ. ದೇವಭಕ್ತರು ಪರಸ್ಪರ ವಿರೋಧಭಾವದಿಂದ ವರ್ತಿಸಲೆಂಬ ಭಾವನೆಯಾಗಿರುವದಿಲ್ಲ.

ಈ ಹದಿನೆಂಟು ಮಹಾಪುರಾಣಗಳಲ್ಲಿ ಸ್ಕಂದಮಹಾಪುರಾಣವು ಶೈವಪುರಾಣಗಳಲ್ಲಿ ಮುಖ್ಯವಾಗಿದೆ. ಈ ಮಹಾಪುರಾಣದಲ್ಲಿ ಸ್ಕಂದಸ್ವಾಮಿ

(ಷಣ್ಮುಖಸ್ವಾಮಿ) ಯ ಜನನಾದಿ ವಿಷಯವೂ, ದೇವತೆಗಳಿಗೂ ಮಹರ್ಷಿ ಗಳಿಗೂ ಉಪದೇಶಮಾಡಿದ ವಿಷಯವೂ ಇರುವದರಿಂದ ಇದಕ್ಕೆ ಸ್ಕಂದಪುರಾಣ ವೆಂದು ಹೆಸರಿಟ್ಟಿದ್ದಾರೆ. ಕಾಲಿದಾಸ ಮಹಾಕವಿಯು ಈ ಮಹಾಪುರಾಣದ ಸಾರವನ್ನು "ಕುಮಾರಸಂಭವ" ಎಂಬ ಸಂಸ್ಕೃತಮಹಾಕಾವ್ಯರೂಪವಾಗಿ ಸರಸವಾಗಿ ರಚಿಸಿದ್ದಾನೆ. ಸ್ಕಂದಮಹಾಪುರಾಣದಲ್ಲಿ ಮಾಹೇಶ್ವರಖಂಡ, ವೈಷ್ಣವಖಂಡ, ಕೇದಾರಖಂಡ, ಸಹ್ಯಾದ್ರಿಖಂಡ, ಕಾಶೀಖಂಡ ಮೊದಲಾದ ಹತ್ತು ಖಂಡಗಳೂ, ಶಂಕರಸಂಹಿತಾ ಮೊದಲಾದ ಆರು ಸಂಹಿತೆಗಳೂ ಅಡಕ ವಾಗಿದ್ದು, ಮಹಾಭಾರತಕ್ಕಿಂತಲೂ ಅಧಿಕ ಗ್ರಂಥಸಂಖ್ಯೆಯುಳ್ಳದ್ದಾಗಿದೆ. ಒಟ್ಟಿಗೆ ಭಾರತದೇಶದಲ್ಲಿರತಕ್ಕ ಸರ್ವ ಪುಣ್ಯಕ್ಷೇತ್ರಗಳ ಮತ್ತು ಸರ್ವಧರ್ಮ ಗಳ ಸಂಸ್ಕೃತಿಯನ್ನೂ, ಪ್ರಾಚೀನತ್ವವನ್ನೂ, ತತ್ವವೈಶಿಷ್ಟ್ಯವನ್ನೂ ಉಪದೇಶ ಮಾಡುವ ಉದ್ಗ್ರಂಥಗಳಲ್ಲಿ ಸ್ಕಂದಮಹಾಪುರಾಣವು ಮುಖ್ಯವಾಗಿದೆ.

ನಮ್ಮ ಕರ್ಣಾಟಕ ದೇಶದಲ್ಲಿರತಕ್ಕ ಎಷ್ಟೋ ಪುಣ್ಯಕ್ಷೇತ್ರಗಳು ಈ ಸ್ಕಂದಮಹಾಪುರಾಣದಲ್ಲಿ ವರ್ಣಿಸಲ್ಪಟ್ಟಿವೆ. ನಮ ಕನ್ನಡನಾಡಿನಲ್ಲಿ ಪ್ರಾಚೀನವೂ, ಪವಿತ್ರವೂ, ಪ್ರಸಿದ್ಧವೂ ಆದ ಶ್ರೀ ರೇಣುಕಾಕ್ಷೇತ್ರ (ಎಲ್ಲಮ್ಮನ ಗುಡ್ಡ)ದ ವರ್ಣನೆಯು ಶ್ರೀ ರೇಣುಕಾಮಹಾತ್ಮ್ಯೆ ಎಂಬ ಹೆಸರಿನಿಂದ, ಸ್ಕಂದ ಮಹಾಪುರಾಣದ ಸಹ್ಯಾದ್ರಿಖಂಡದಲ್ಲಿ ನಾಲ್ವತ್ತು ಅಧ್ಯಾಯಗಳಿಂದ ತುಂಬಿ ಹೋಗಿದೆ. ಇದು ಸಂಸ್ಕೃತದಲ್ಲಿದ್ದು ಇದನ್ನು ಕನ್ನಡಾನುವಾದದಿಂದ ಮುದ್ರಿಸ ಬೇಕೆಂದು ನಮ್ಮ ಸದಿಚ್ಛೆಯಾಗಿತ್ತು. ನಮ್ಮ ಇಚ್ಛಾನುಸಾರವಾಗಿಯೂ, ಶ್ರೀ ರೇಣುಕಾದೇವಿಯ ಪ್ರೇರಣೆಯಿಂದಲೂ ಶ್ರೀ ರೇಣುಕಾದೇವಿಯ ಅರ್ಚಕ ರಲ್ಲಿ ಮುಖ್ಯರಾದ ಗೋವಿಂದಗೌಡ ಪರಸನಗೌಡ ರೇಣಕಿಗೌಡರು ಎಂಬ ಸದಾಚಾರಿಗಳೂ, ಧಾರ್ಮಿಕರೂ ಆದ ಸನ್ಮಾನ್ಯ ವ್ಯಕ್ತಿಗಳಿಗೆ ಹೇಳಿ, ಸನ್ ೧೮೭೭ನೇ ಇಸ್ವಿ, ಫೆಬ್ರುವರಿ ೨ನೇ ತಾರೀಕಿನ ದಿವಸ, ಮುಂಬಯಿ ನಗರ ನಿವಾಸಿಗಳಾದ ಜೆ. ಗೆರಸನ್ ಡಾಕುನ್ಹಾ ಎಂಬ ಪರಿಶೋಧಕರು ಮುದ್ರಿಸಿ ಪ್ರಕಾಶಪಡಿಸಿದ ಸ್ಕಂದಪುರಾಣಾಂತರ್ಗತ ಸಹ್ಯಾದ್ರಿಖಂಡವನ್ನು ತರಿಸಿ ಕೊಟ್ಟೆವು. ನಮ್ಮ ಹೇಳಿಕೆಯಂತೆ ಗೋವಿಂದಗೌಡರು ರೇಣಕಿಗೌಡರು ಇವರು ಸಹ್ಯಾದ್ರಿಖಂಡಾಂತರ್ಗತ ಶ್ರೀ ರೇಣುಕಾಮಹಾತ್ಮ್ಯೆಯನ್ನು ಸಂಸ್ಕೃತದಲ್ಲಿದ್ದ ದ್ದನ್ನು ಸವದತ್ತಿ ಬೆಟಸೂರಮಠ ಶ್ರೀ ರುದ್ರಯ್ಯನವರಿಂದ ಕನ್ನಡಭಾಷೆ ಯಲ್ಲಿ ಅನುವಾದ ಮಾಡಿಸಿ ಮುದ್ರಿಸುವ ಸಾಹಸದಲ್ಲಿದ್ದರು. ಪರಂತು

ದೈವಾನುಗತಿಯಿಂದ ಅವರ ಜೀವಮಾನದಲ್ಲಿ ಅವರ ಸತ್ಯಸಂಕಲ್ಪವು ಈಡೇರ ಲಿಲ್ಲ. ಕನ್ನಡ ಜನತೆಗೆ ಶ್ರೀ ರೇಣುಕಾದೇವಿಯ ಮಹಾತ್ಮ್ಯೆಯು ತಿಳಿಯಲಿಲ್ಲ. ಇದನ್ನು ತಿಳಿದು ಅವರ ಸತ್ಯಸಂಕಲ್ಪವನ್ನು ಈಡೇರಿಸುವದಕ್ಕಾಗಿ ಅವರ ಸಹೋದರರಾದ ಶಿವನಗೌಡರೂ ಅವರ ಸತ್ಪುತ್ರರಾದ ವಿಶ್ವನಾಥಗೌಡರೂ— ಶ್ರೀ ರೇಣುಕಾದೇವಿಯ ಮಹಾತ್ಮೆ ಯನ್ನು ಉಪದೇಶ ಮಾಡುವ ಸಂಸ್ಕೃತ ದಿಂದ ಕನ್ನಡದಲ್ಲಿ ಭಾಷಾಂತರಿಸಿದ ನಾಲ್ವತ್ತು ಅಧ್ಯಾಯದ ಈ ಚಿಕ್ಕ ಪವಿತ್ರ ವಾದ ಹೊತ್ತಿಗೆಯನ್ನು ಮುದ್ರಿಸಿ ಪ್ರಕಾಶಪಡಿಸುವದು ಅತ್ಯಂತ ಸ್ತುತ್ಯವಾದ ವಿಷಯವಾಗಿದೆ. ಇವರೀ ಸ್ತುತ್ಯಕರ್ತವ್ಯಕ್ಕೆ ಸಹಕಾರವನ್ನೀಯುವ ಸದಿಚ್ಛೆ ಯಿಂದ ಈ ಮುನ್ನುಡಿಯನ್ನು ಬರೆದು, ಶ್ರೀ ರೇಣುಕಾದೇವಿಯ ಮಹಾತ್ಮ್ಯೆ ಯನ್ನು ಸಪ್ರಮಾಣವಾಗಿಯೂ, ಸಂಕ್ಷಿಪ್ತವಾಗಿಯೂ ಕನ್ನಡ ವಾಚಕರ ಅವಗಾಹನೆಗೆ ತಂದುಕೊಟ್ಟಿದ್ದೇವೆ. ದೇವಿಭಕ್ತರಾದ ವಾಚಕರು ಸದಸದ್ವಿ ವೇಕಬುದ್ಧಿಯಿಂದ ಮೊದಲು ಮುನ್ನುಡಿಯನ್ನೋದಿ ಆ ಮೇಲೆ ಮುಂದಿನ ವಿಷಯವನ್ನು ಓದಲೆಂದು ನಂಬಿದ್ದೇವೆ.

ಯಾವದಾವದರೊಂದು ಪುಣ್ಯಕ್ಷೇತ್ರದ ವಿಷಯವಾಗಿ ಮುನ್ನುಡಿಯನ್ನು ಬರೆಯಬೇಕಾದರೆ, ಆ ಪುಣ್ಯಕ್ಷೇತ್ರಾಧಿದೇವತೆಯ ಕಾಲ, ದೇಶಗಳನ್ನು ಸಪ್ರಮಾಣವಾಗಿ ಬರೆದು ವಾಚಕರ ಸಂದೇಹವನ್ನು ನಿವಾರಣೆಮಾಡುವದು ಮುನ್ನುಡಿಕಾರರ ಮುಖ್ಯ ಕರ್ತವ್ಯವಾಗಿದೆ. ಅದರಂತೆ ಈ ಮುನ್ನುಡಿಯಲ್ಲಿ ಶ್ರೀ ರೇಣುಕಾದೇವಿಯು ಯಾವ ಕಾಲದಲ್ಲಿದ್ದಳು ಮತ್ತು ಯಾವ ದೇಶದಲ್ಲಿ ನೆಲೆಸಿದಳು ಎಂಬ ವಿಷಯವನ್ನೂ, ಶ್ರೀ ಜಮದಗ್ನಿಮಹರ್ಷಿಯ ವಂಶಾವಳಿ ಯನ್ನೂ, ಆ ವಂಶೋದ್ಭವರಾದ, ಈಗ ಉಗರಗೊಳ್ಳ (ಅಲಕಿಗ್ರಾಮ) ದ ಪರ್ವತದಲ್ಲಿ ವಿರಾಜಿಸುವ ಶ್ರೀ ದತ್ತಾತ್ರೇಯಾಶ್ರಮದ ನಿವಾಸಿಗಳಾದ ಲಿಂಗ ರಾಶಿ, ಗೂಢರಾಶಿ, ತೃಪ್ತರಾಶಿ, ಪರಶುರಾಶಿ ವಂಶಾನುಯಾಯಿಗಳಾದ, ಶ್ರೀ ರೇಣುಕಾದೇವಿಯ ಅರ್ಚಕರ ವಿಷಯವನ್ನೂ ಸಂಕ್ಷಿಪ್ತವಾಗಿ ವಿವರಿಸಿದ್ದೇವೆ. ಓದುಗರು ಈ ಸಪ್ರಮಾಣವಾದೀ ಚರಿತ್ರಾಂಶವನ್ನು ಓದಿ ಯಥಾರ್ಥ ವಿಷಯ ವನ್ನು ಪರಿಗ್ರಹಿಸುವರೆಂದು ಪೂರ್ಣ ವಿಶ್ವಾಸವುಂಟು.

ಶ್ರೀ ವಿಷ್ಣುವಿನ ದಶಾವತಾರಗಳಲ್ಲಿ ಪರಶುರಾಮಾವತಾರವು ಸೀತಾ ರಾಮಾವತಾರಕ್ಕಿಂತ ಪೂರ್ವದ್ದೆಂದು ಸರ್ವರಿಗೂ ವಿದಿತವಾದ ವಿಷಯ ವಾಗಿದೆ. ಸೀತಾರಾಮಾವತಾರವು ತ್ರೇತಾಯುಗದಲ್ಲಿ ಆದ್ದರಿಂದ ಪರಶು

ರಾಮಾವತಾರವು ತ್ರೇತಾಯುಗದ ಆದಿಯಲ್ಲಿ ಆಗಿಹೋಯಿತೆಂದು ನಿಃಸಂದೇಹವಾಗಿ ಹೇಳಬಹುದು. ಈಗಿನ ನವೀನ ಸುಧಾರಕರಿಗೆ ಯುಗಗಳ ಕಾಲಮಾನವು ಸರಿಯಾಗಿ ತೋರುವದಿಲ್ಲ. ಭಾರತೀಯ ಜ್ಯೋತಿಷ್ಯಶಾಸ್ತ್ರಾನುಸಾರವಾಗಿ ಯುಗಗಳ ಕಾಲಮಾನವು ಸರ್ವಮಾನ್ಯವಿದ್ದರೂ—ಕೆಲವು ಪಾಶ್ಚಾತ್ಯಪರಂಪರೆಯನ್ನು ಪಾಲಿಸತಕ್ಕ ಸುಧಾರಕರು ಒಪ್ಪತಕ್ಕ— ವೇದಕಾಲ, ಉಪನಿಷತ್ಕಾಲ, ಶಿವಾಗಮ ಮತ್ತು ಸ್ಮೃತಿಕಾಲ, ಪುರಾಣಕಾಲ, ಇತಿಹಾಸ ಕಾಲಗಳ ಅನುಸಾರವಾಗಿ ಈ ರೇಣುಕಾ ಮಹಾತ್ಮೆಯ ವಿಷಯವನ್ನು ವಿದಿತಪಡಿಸುತ್ತೇವೆ. ಜ್ಯೋತಿಷ ಶಾಸ್ತ್ರಾನುಸಾರವಾಗಿ ಮಕರಸಂಕ್ರಮಣದ ದಿವಸ ಯಾವುದೋ ಅದೇ ಜನವರಿ ೧೪ನೇ ತಾರೀಖಿನಾಗಿದ್ದು ಅದಕ್ಕನುಗುಣವಾದ ರೀತಿಯಂತೆ ವೇದಕಾಲದಿಂದ ಈ ವಿಷಯವನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇವೆ. ಅತ್ಯಂತ ಪ್ರಾಚೀನಕಾಲವಾದ ವೇದಕಾಲದಲ್ಲಿ ಈ ಶ್ರೀ ರೇಣುಕಾಕ್ಷೇತ್ರದ ಅಧಿನಾಯಕನಾದ ಶ್ರೀ ಜಮದಗ್ನಿಮಹರ್ಷಿಯ ವಿಷಯವನ್ನು ಉಲ್ಲೇಖ ಮಾಡುತ್ತೇವೆ.

"ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯ ತ್ರಿಯಾಯುಷಂ
ಅಗಸ್ತ್ಯಸ್ಯ ತ್ರಿಯಾಯುಷಂ ಯದ್ದೇವಾನಾಂ ತ್ರಿಯಾಯುಷಂ
ತನ್ಮೇ ಅಸ್ತು ತ್ರಿಯಾಯುಷಂ'

ಇದೊಂದೇ ವೇದಪ್ರಮಾಣವು ರೇಣುಕಾಕ್ಷೇತ್ರದ ಅಧಿನಾಯಕನಾದ ಜಮದಗ್ನಿಮಹರ್ಷಿಯು ವೇದಕಾಲೀನನೆಂದು ಹೇಳುವದಕ್ಕೆ ಸಬಲಪ್ರಮಾಣವು. ವೇದಪ್ರತಿಪಾದ್ಯನಾದ ಜಮದಗ್ನಿ ಮಹರ್ಷಿಯೂ, ಅವನ ಮೂಲಪುರುಷನಾದ ವೇದಪ್ರತಿಪಾದ್ಯ ಕಶ್ಯಪಮಹರ್ಷಿಯೂ, ಶ್ರೀ ಜಗದ್ಗುರು ರೇಣುಕಶಿವಾಚಾರ್ಯರಿಂದ ವೀರಶೈವ ಸಿದ್ಧಾಂತದ ಸದುಪದೇಶವನ್ನು ಹೊಂದಿದ ಅಗಸ್ತ್ಯಮಹರ್ಷಿಯೂ, ಇವರಂತೆ ಎಷ್ಟೋ ವೀರಶೈವ—ಶೈವ ಮಹರ್ಷಿಗಳೂ ವೇದಕಾಲದಲ್ಲಿ ಈ ಭೂತಲದಲ್ಲಿ ಅವತರಿಸಿ ತಮ್ಮ ಮಹಿಮೆಯನ್ನು ತೋರ್ಪಡಿಸಿದರು. ಜಮದಗ್ನಿಮಹರ್ಷಿಯು ವೇದಕಾಲದ ಮಹರ್ಷಿಯಾದ ಮೇಲೆ ಮುಂದೆ—ಉಪನಿಷತ್ಕಾಲ, ಶಿವಾಗಮಕಾಲ, ಸ್ಮೃತಿಕಾಲ, ಪುರಾಣಕಾಲ, ಇತಿಹಾಸಕಾಲಗಳಲ್ಲಿ ಈ ಜಮದಗ್ನಿಮಹರ್ಷಿಯ ವಿಷಯವಾಗಿ ಆಯಾ ಕಾಲೀನ ಉದ್ಗ್ರಂಥಗಳು ಉಲ್ಲೇಖಮಾಡುವದು ಸ್ವಾಭಾವಿಕವಾಗಿದೆ. ಅಂತೇ ಕಶ್ಯಪಾನ್ವಯ ಸಂಜಾತನಾದ ಜಮದಗ್ನಿಮಹರ್ಷಿಯು—ರೇಣುಕಾ

ಮಹಾರಾಜನ ಯಜ್ಞಸಂಭವಳಾಗಿ ಈ ಜಗತ್ತಿನಲ್ಲಿ ಅನಂತ ಮಹಿಮೆಯನ್ನು ತೋರಿ ಜಗದುದ್ಧಾರಲೀಲೆಯಿಂದ ಸಾಕ್ಷಾತ್ ಜಗದಂಬೆಯೆಂದು ವರ್ಣಿಸಲ್ಪಟ್ಟ ಶ್ರೀ ರೇಣುಕಾ (ಯಲ್ಲಮ್ಮ) ದೇವಿಯ ಮತ್ತು ಇವರಿಬ್ಬರ ಪವಿತ್ರ ಗರ್ಭದಿಂದ ಉದಯಿಸಿ ಜಗದೇಕವೀರನೆನಿಸಿದ ಪರಶಿವನ ಅನನ್ಯ ಭಕ್ತನೂ, ವಿಷ್ಣುವಿನ ಅವತಾರಿಯೂ ಆದ ಶ್ರೀ ಪರಶುರಾಮನ ಅಪಾರ ಮಹಿಮೆಯನ್ನು ವೇದ ವ್ಯಾಸರು ಸ್ಕಂದ ಪುರಾಣಾಂತರ್ಗತ ಸಹ್ಯಾದ್ರಿ ಖಂಡದಲ್ಲಿ ಉಲ್ಲೇಖಮಾಡಿದ್ದು ಅತ್ಯಂತ ಸಮಂಜಸವೂ ಸರ್ವ ಪಂಡಿತಮಾನ್ಯವೂ ಆಗಿದೆ. ಒಟ್ಟಿಗೆ ವಿಷ್ಣುವಿನ ದಶಾವತಾರಗಳನ್ನು ವರ್ಣಿಸುವ ವೈಷ್ಣವ ಪುರಾಣಗಳಲ್ಲಿಯೂ, ವಾಲ್ಮೀಕಿ ರಾಮಾಯಣವೆಂಬ ಪ್ರಸಿದ್ಧ ಐತಿಹಾಸಿಕಗ್ರಂಥಗಳಲ್ಲಿಯೂ, ಅರ್ವಾಚೀನ ಸಂಸ್ಕೃತಸಾಹಿತ್ಯದಲ್ಲಿಯೂ, ಪರಶುರಾಮನ ವಿಷಯವು ಪ್ರತಿಪಾದಿಸಲ್ಪಟ್ಟಿದ್ದು, ಅವನ ಜನನೀಜನಕರಾದ ಶ್ರೀ ರೇಣುಕಾ ಜಮದಗ್ನಿ ಮಹರ್ಷಿಗಳ ವಿಷಯವು ಕೈಮುತಿಕ ನ್ಯಾಯದಿಂದ ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಂತಾಯಿತಲ್ಲವೇ?

## ಶ್ರೀ ರೇಣುಕಾದೇವಿಯು ನೆಲೆಸಿದ ದೇಶವು

ಶ್ರೀ ರೇಣುಕಾದೇವಿಯ ಮತ್ತು ಶ್ರೀ ಜಮದಗ್ನಿಯ ಕಾಲವೂನವನ್ನು ಹೇಳಿದ್ದಾಯಿತು. ಇನ್ನು ಮೇಲೆ ಆ ದೇವಿಯು ನೆಲೆಸಿದ ಪುಣ್ಯಮಯ ಪ್ರದೇಶವಾವುದೆಂದು ವಿಚಾರಿಸೋಣ.

ಮಾಹಿಷ್ಮತಿ ನಗರದ ಅರಸನಾದ ಕಾರ್ತವೀರ್ಯಾರ್ಜುನನು ಜಮ ದಗ್ನಿಯ ಆಶ್ರಮಕ್ಕೆ ತನ್ನ ಪರಿವಾರಸಮೇತನಾಗಿ ಅಕಸ್ಮಾತ್ ಆಗಮಿಸಿದನು. ಆಗ ಆ ಚಿಕ್ಕದಾದ ಆಶ್ರಮದಲ್ಲಿ ಜಮದಗ್ನಿಮಹರ್ಷಿಯು ಕಾರ್ತವೀರ್ಯನ ಸಮಸ್ತ ಪರಿವಾರವನ್ನು ಸಕಲ ರಾಜೋಪಚಾರಗಳಿಂದ ಎಳ್ಳಷ್ಟೂ ಕೊರತೆ ಯಾಗದಂತೆ ಸತ್ಕರಿಸಿದನು. ಯಾವ ಸಾಹಿತ್ಯ ಸಿದ್ಧತೆಯಿಲ್ಲದೆ ತನ್ನ ಮತ್ತು ತನ್ನ ಸಕಲ ಪರಿವಾರದ ಅನ್ನೋದಕ ಆದರ ಸತ್ಕಾರವು ಆದದ್ದನ್ನು ಕಾರ್ತ ವೀರ್ಯನು ತಿಳಿದು ವಿಸ್ಮಿತನಾಗಿ, ಇದರ ಮೂಲಕಾರಣವೇನಿದೆ ಎಂದು ವಿಚಾರಿಸಿ, ಜಮದಗ್ನಿಯ ಹತ್ತರವಿದ್ದ ಕಾಮಧೇನುವಿನ ಪ್ರಭಾವದಿಂದಲೇ ಅತಿಥಿಗಳ ಅನ್ನೋದಕ ಆದರೋಪಚಾರವಾಗುವದೆಂದು ಮನಗಂಡನು. ಆಗ ಅವನು ಆ ಕಾಮಧೇನುವನ್ನು ತನಗೆ ಕೊಡಲು ಜಮದಗ್ನಿಮಹರ್ಷಿ ಯನ್ನು ಕೇಳಿದನು. ಅದಕ್ಕೆ ಜಮದಗ್ನಿಮಹರ್ಷಿಯು ಒಪ್ಪಿಕೊಳ್ಳದಿರಲು

ಆಗ ಕಾರ್ತವೀರ್ಯಾರ್ಜುನನು ಕೋಪದಿಂದ, ಜಮದಗ್ನಿಯನ್ನು ಕೊಂದು ಆ ಕಾಮಧೇನುವನ್ನು ಅಪಹರಿಸಬೇಕೆಂಬ ದುರುದ್ದೇಶದಿಂದ ತನ್ನ ನಿಶಿತವಾದ ಶಸ್ತ್ರಾಸ್ತ್ರಗಳಿಂದ ಜಮದಗ್ನಿಯ ಶರೀರವನ್ನು ಕಡಿದು ಕೊಂದನು. ಆಗ ರೇಣುಕೆಯು ಪತಿಯ ಮೇಲೆ ಬೀಳಲು ಅವಳಿಗೆ ೨೧ ಸಾರೆ ಶಸ್ತ್ರಾಸ್ತ್ರಗಳಿಂದ ಘಾಯಗೊಳಿಸಿದನು. ಆಗ ಈ ದುರಂತದ ಸಮಯದಲ್ಲಿ ಕಾಮಧೇನು ಕಾರ್ತವೀರ್ಯಾರ್ಜುನನ ಕೈವಶವಾಗದೆ ಸ್ವರ್ಗಕ್ಕೆ ಗಮನಮಾಡಿತು. ರೇಣುಕೆಯು ಪತಿಯ ಮತ್ತು ತನ್ನ ದುರಂತದ ದುಃಖದಿಂದ ಪರಶುರಾಮನನ್ನು ಕರೆಯಲು, ಶ್ರೀ ಮಹಾದೇವರ ಹತ್ತಿರ ಧನುರ್ವಿದ್ಯಾಭ್ಯಾಸಕ್ಕಾಗಿ ಹೋದ ಪರಶುರಾಮನು ಶ್ರೀ ಮಹಾದೇವರ ಅಂತರ್ಜ್ಞಾನದೃಷ್ಟಿಯಿಂದ ಅರಿತು, ತತ್‌ಕ್ಷಣವೇ ಕೈಲಾಸದಿಂದ ಜನನೀಜನಕರ ಸನ್ನಿಧಿಗೆ ಬಂದು, ಅವರ ದುರವಸ್ಥೆಯನ್ನು ಕಂಡು ದುಃಖಿತನಾಗಿ ಇದರ ಕಾರಣವೇನೆಂದು ಜನನಿಯನ್ನು ಕೇಳಲು, ಆಗ ರೇಣುಕೆಯು ಸಾದ್ಯಂತ ವಿಷಯವನ್ನು ಸುತನಿಗೆ ಹೇಳಿ ಆ ದುಷ್ಟನಾದ ಕಾರ್ತವೀರ್ಯಾರ್ಜುನನನ್ನು ನಾಶಮಾಡಬೇಕೆಂದು ಅಪ್ಪಣೆಯಿತ್ತು —ತನಗೆ ೨೧ ಘಾಯಗಳನ್ನು ಮಾಡಿದ್ದಕ್ಕೆ ಕ್ಷತ್ರಿಯಕುಲವನ್ನು ೨೧ ಸಾರೆ ನಾಶಮಾಡಬೇಕೆಂದು ಹೇಳಿದಳು. ಜನನಿಯ ಅಪ್ಪಣೆಯನ್ನು ಕೇಳಿ, ಮೊದಲು ಜನಕನ ಅಗ್ನಿಸಂಸ್ಕಾರವನ್ನು ಮಾಡಿ ಆ ಮೇಲೆ ಜನನಿಯ ಅಪ್ಪಣೆಯನ್ನು ಈಡೇರಿಸಬೇಕೆಂದು, ಜನಕನ ಅಗ್ನಿಸಂಸ್ಕಾರದ ಪವಿತ್ರ ಸ್ಥಾನವನ್ನು ಶೋಧಿಸಲು, ಜನನಿಯ ಅಪ್ಪಣೆಯ ಪ್ರಕಾರ ಒಂದು ಕಾವಡಿಯಲ್ಲಿ—ಒಂದು ಪರಡಿಯಲ್ಲಿ ಜನಕನ ದೇಹವನ್ನೂ, ಮತ್ತೊಂದು ಪರಡಿಯಲ್ಲಿ ಜನನಿಯನ್ನೂ ಸುರಕ್ಷಿತವಾಗಿ ಇಟ್ಟು ಅಗ್ನಿಸಂಸ್ಕಾರಕ್ಕೆ ಪವಿತ್ರವಾದ ಸ್ಥಾನವನ್ನು ಹುಡುಕುತ್ತ ಸಹ್ಯಾದ್ರಿಯ ಮಾರ್ಗವಾಗಿ ದಕ್ಷಿಣ ಭಾರತಕ್ಕೆ ಬಂದನು. ಅಲ್ಲಿ ಸಹ್ಯಾದ್ರಿಯ ಶಾಖೆಯಾದ ರಾಮಶೃಂಗಪರ್ವತದ ತಡೆಯಲ್ಲಿ ಶ್ರೀ ದತ್ತಾತ್ರೇಯನ ಆಶ್ರಮವಾದ ಅಲಕಗ್ರಾಮ (ಉಗರಗೊಳ್ಳ)ಕ್ಕೆ ಬಂದನು. ಆಗ "ಇಲ್ಲಿಯೇ ದತ್ತಾತ್ರೆಯ ಗುರುಗಳಿಂದ ಅಗ್ನಿ ಸಂಸ್ಕಾರವನ್ನು ಮಾಡಬೇಕು"ಎಂದು ಆಕಾಶವಾಣಿಯಾಗಲು ಅಲ್ಲಿಯೇ ಪರಶುರಾಮನು ಜನಕನ ಅಗ್ನಿ ಸಂಸ್ಕಾರವನ್ನು ಮಾಡಲು ಸಿದ್ಧನಾಗಲು, ಶ್ರೀ ರೇಣುಕಾದೇವಿಯು ಪತಿಯಕೂಡ ಸಹಗಮನ ಮಾಡಲುಸಿದ್ಧಳಾದಳು. ಆಗ ಜನನೀಜನಕರ ವಿಯೋಗದಿಂದ ದುಃಖಿತನಾದ ಪರಶುರಾಮನು "ಹಾಗೆ ಮಾಡಬಾರದು" ಎಂದು ಪ್ರಾರ್ಥಿಸಲಾಗಿ "ಪುತ್ರನೇ , ನಮ್ಮಿಬ್ಬರನ್ನು ಮೊದಲು

ಅಗ್ನಿಸಂಸ್ಕಾರಹೊಂದಿಸು, ಆ ಮೇಲೆ ನಿನ್ನ ಪ್ರಾರ್ಥನೆಯಂತೆ ನಾವಿಬ್ಬರೂ ಸಜೀವವಾಗಿ ಅಗ್ನಿಯಿಂದ ಬರುತ್ತೇವೆ. ನಾವು ಬಂದ ಮೇಲೆ ನನ್ನ ಪ್ರೀಯ ಪುತ್ರರೂ ನಿನ್ನ ಅಣ್ಣಂದಿರೂ ಆದ ವಸು ಮೊದಲಾದ ನಾಲ್ವರನ್ನೂ, ಅವರ ಪುತ್ರರನ್ನೂ ನಮ್ಮ ಸತ್ಕಾರಕ್ಕಾಗಿ ನೇಮಿಸಿ, ನೀನು ಮಾಹಿಷ್ಮತಿ ನಗರವನ್ನು ಮುತ್ತಿ ಆ ದುಷ್ಟನಾದ ಕಾರ್ತವೀರ್ಯನನ್ನು ಕೊಂದು, ಅವನು ನನ್ನನ್ನು ೨೧ ಸಾರೆ ಘಾಯಗೊಳಿಸಿದಂತೆ ಕ್ಷತ್ರಿಯಕುಲವನ್ನು ನಾಶಮಾಡು ಎಂದು ಅಪ್ಪಣೆಯಿತ್ತಳು. ಆಗ ಪರಶುರಾಮನು ಜನನಿಯ ಅಪ್ಪಣೆಯಂತೆ ಅಗ್ನಿ ಸಂಸ್ಕಾರಕ್ಕೆ ಗಂಗಾತೀರ್ಥಗಳಿಂದ ಪವಿತ್ರವಾದ ಜಲವನ್ನು ತರಲಿಕ್ಕೆ ವಿಲಂಬ ವಾಗುವದೆಂದು ತಿಳಿದು, ತನ್ನ ಧನುಸ್ಸಿಗೆ ಬಾಣವನ್ನು ಹೂಡಿ ಪರ್ವತವನ್ನು ಛೇದಿಸಲಾಗಿ, ಆ ಪರ್ವತದಿಂದ ಗಂಗಾ, ಯಮುನಾ, ಸರಸ್ವತಿ, ಗೋದಾವರಿ ಮೊದಲಾದ ಮಹಾನದಿಗಳ ಮತ್ತು ಚಕ್ರ ಪುಷ್ಕರಿಣಿ ಮೊದಲಾದ ತೀರ್ಥಗಳ ಪವಿತ್ರವಾದ ಜಲವು ಮೇಲಕ್ಕೆ ಎಜೆಯಲಾಗಿ ಆ ತೀರ್ಥ (ಎಣಿಗೊಂಡ)ದ ಜಲವನ್ನು ಜನನೀಜನಕರ ಮೇಲೆ ಸಿಂಪಡಿಸಿ ಅಗ್ನಿಸಂಸ್ಕಾರವನ್ನು ಮಾಡಿ, ಪುನಃ ಪ್ರಾರ್ಥಿಸಲಾಗಿ ಜಮದಗ್ನಿ ಮತ್ತು ರೇಣುಕಾದೇವಿಯರು ಅಗ್ನಿ ಯಿಂದ ಹೊರಗೆ ಬಂದು ಪರಶುರಾಮನಿಗೆ ಆಶೀರ್ವಾದವಿತ್ತರು. ಅದರಿಂದ ಪರಶುರಾಮನೂ ಅವನ ಬಂಧುಬಳಗದವರೂ ಸಂತುಷ್ಟರಾದರು. ಸಮಸ್ತ ದೇವತೆಗಳು ಪ್ರಸನ್ನರಾಗಿ ಆ ರೇಣುಕಾದೇವಿಯ ಮೂರ್ತಿಯಲ್ಲಿ ಅಂತರ್ಧಾನ ವಾದರು. ಸರ್ವಗಿರಿಗಳು ಆ ಪರ್ವತದಲ್ಲಿ ಲೀನವಾದವು. ಜಗತ್ತಿನ ಸರ್ವ ತೀರ್ಥಗಳು ಎಣಿಗೊಂಡತೀರ್ಥದಲ್ಲಿ ಕಲೆತುಹೋದವು. ಆಗ ಪರಶು ರಾಮನು ತನ್ನ ಅಣ್ಣಂದಿರನ್ನೂ, ಅವರ ಮಕ್ಕಳಾದ ಲಿಂಗಋಷಿ, ಗೂಢಋಷಿ, ಪರಶುಋಷಿ, ತೃಪ್ತಋಷಿಗಳೆಂಬ ಮೊಮ್ಮಕ್ಕಳನ್ನೂ ಜಮದಗ್ನಿ ಮತ್ತು ರೇಣುಕಾದೇವಿಯರ ಸೇವಾಸತ್ಕಾರಕ್ಕಾಗಿ ನೇಮಿಸಿ ಜನನಿಯ ಅಪ್ಪಣೆಯಂತೆ ಸೇನಾಸಮೇತನಾಗಿ ಮಾಹಿಷ್ಮತಿನಗರವನ್ನು ಮುತ್ತಿಗೆ ಹಾಕಿ, ಕಾರ್ತ ವೀರ್ಯನ ಸಹಸ್ರಭುಜಗಳನ್ನು ಪರಶುವಿನಿಂದ ಕತ್ತರಿಸಿ, ಅವನ ಚಂಡವನ್ನು ತುಂಡರಿಸಿ, ೨೧ ಸಾರೆ ಕ್ಷತ್ರಿಯಕುಲವನ್ನು ನಾಶಮಾಡಿ, "ನಿಕ್ಷಾತ್ರಮುರ್ವೀ ತಲ" ಎಂಬಂತೆ ಸಮಸ್ತ ಭೂಮಂಡಲವನ್ನು ಕ್ಷತ್ರಿಯಶೂನ್ಯವನ್ನಾಗಿ ಮಾಡಿ, ಪುನಃ ಜನನೀಜನಕರ ಸನ್ನಿಧಿಗೆ ಆಗಮಿಸಿ, ತನ್ನ ಶತ್ರುವಿಜಯದ ವಾರ್ತೆ ಯನ್ನು ಅರುಹಿ ಎಲ್ಲರನ್ನೂ ಆನಂದಗೊಳಿಸಿ, ಉಗರಗೊಳ್ಳದ ರಾಮಶೃಂಗ

ಪರ್ವತದ ಶ್ರೀ ದತ್ತಾತ್ರೇಯ ಆಶ್ರಮದಲ್ಲಿ ತನ್ನ ಮತ್ತು ತನ್ನ ಜನನೀಜನಕರಾದ ಶ್ರೀ ರೇಣುಕಾ ಜಮದಗ್ನಿಮಹರ್ಷಿಗಳ ಸ್ಥಾನವು ಸ್ಥಿರವಾಗುವಂತೆ ಭಕ್ತರನ್ನು ಸದಯಾಂತಃಕರಣದಿಂದ ಪರಿಪಾಲಿಸುತ್ತ, ಜನನೀಜನಕರ ಕೂಡ ನೆಲಸಿದನು. ಈ ವಿಷಯವು ಈ ಕಥಾಭಾಗವನ್ನು ಓದಿದರೆ ಪ್ರತಿಯೊಬ್ಬನಿಗೂ ವಿದಿತವಾಗುವದು. ಆದುದರಿಂದ ಶ್ರೀ ರೇಣುಕಾದೇವಿಯು ನೆಲಸಿದ ಪುಣ್ಯಕ್ಷೇತ್ರವು—ಕರ್ನಾಟಕದೇಶಾಂತರ್ಗತ ಬೆಳಗಾಂವ ಜಿಲ್ಲಾ ಸವದತ್ತಿ ಪೂರ್ವದಿಕ್ಕಿಗೆ ಇರುವ ಉಗರಗೊಳ್ಳದ ಹದ್ದಿಯಲ್ಲಿರುವ ರಾಮಶ್ರುಂಗಪರ್ವತವೆಂದು ಹೇಳಲು ಏನೂ ಅಭ್ಯಂತರವಿಲ್ಲ.

## ಜಮದಗ್ನಿ ಮಹರ್ಷಿಯ ವಂಶಾವಳಿ

ಕಶ್ಯಪಾನ್ವಯಸಂಜಾತನಾದ ಜಮದಗ್ನಿಮಹರ್ಷಿಯ ವಂಶಾವಳಿಯು, ಸಹ್ಯಾದ್ರಿಖಂಡದ ರೇಣುಕಾಮಹಾತ್ಮ್ಯೆಯ ಪಂಚಮಾಧ್ಯಾಯದ ಅಂತ್ಯದಲ್ಲಿ ಇಂತಿದೆ—ವರುಣನ ಪುತ್ರನಾದ ಭೃಗುಮುನಿಯನ್ನು ವರ್ಣಿಸಿದ ಮೇಲೆ—

ಕಮಂಡಲೂದಕೇನಾಥ ಮೂರ್ಛಿತಾಂ ಭೂತಲಾನ್ಮುನಿಃ ||
ಭಾರ್ಯಾಮುತ್ಥಾಪಯಾಮಾಸ ಕುಮಾರಂ ಚಾದದೇ ಭೃಗುಃ ||
ಏವಂ ಸಭೃಗುಣಾಶಪ್ತಃ ಸರ್ವದೇವಮಯೋಽನಲಃ ||
ಚ್ಯುತಃ ಸಮಾತುರುದರಾತ್ತಸ್ಮಾಚ್ಚ್ಯವನಭಾರ್ಗವಃ ||
ಏವಂ ಭೃಗೋರ್ಮಹಾತೇಜಾ ಗುರುಭಕ್ತಿಪರಾಯಣಃ ||
ಪೌಲೋಮಿಗರ್ಭಸಂಭೂತೋಜಜ್ಞೇಚ್ಯವನಭಾರ್ಗವಃ ||
ಚ್ಯವನಸ್ಯಸುತಃ ಶ್ರೀಮಾನ್ ಋಚೀಕೋನಾಮನಾಮತಃ ||
ಸ್ವಯಂ ಪಿತಾಮಹೋತ್ಪನ್ನಃ ಪ್ರಸಾದಾದ್ಬ್ರಹ್ಮಣಸ್ತತಃ ||

**(ರೇಣುಕಾಮಹಾತ್ಮ್ಯೆ ೫ನೇ ಅಧ್ಯಾಯ ೨೨ರಿಂದ ೩೫ರ ವರೆಗೆ)**

ಮೇಲಿನ ಶ್ಲೋಕಗಳಿಂದ ಹೇಳಲ್ಪಟ್ಟ ಕಥಾಭಾಗವು ೫ನೇ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟಿದೆ. ಇದರ ಮೇಲಿಂದ ಭೃಗುಮಹರ್ಷಿಯ ಧರ್ಮಪತ್ನಿಯಾದ ಪೌಲೋಮೀದೇವಿಯ ಗರ್ಭದಿಂದ ಸಾಕ್ಷಾತ್ ಅಗ್ನಿದೇವನೇ ಚ್ಯುತನಾದ್ದರಿಂದ ಅವನಿಗೆ ಚ್ಯವನಭಾರ್ಗವನೆಂಬ ಹೆಸರುಂಟಾಯಿತು. ಈ ಚ್ಯವನಭಾರ್ಗವಮಹರ್ಷಿಯು ಅನನ್ಯ ಶಿವಭಕ್ತಿಯುಳ್ಳವನಾಗಿದ್ದನು. ಇವನು ಪರಶಿವನ ಅನುಗ್ರಹವನ್ನು ಹೊಂದುವದಕ್ಕಾಗಿ "ಪಂಚಬ್ರಹ್ಮಯಜ್ಞ"ವನ್ನು

ಮಾಡಿದನು. ಈ ಯಜ್ಞಸಮಾರಂಭವು ಮಲಾಪಹಾರಿಣೀ ಉತ್ತರತೀರದಲ್ಲಿ ನೃಸಿಂಹ ಮತ್ತು ಶರಭಕ್ಷೇತ್ರದ ಸಮೀಪದಲ್ಲಿ ಅಂದರೆ ಈಗ ಮುಗಟಖಾನ ಹುಬ್ಬಳ್ಳಿಯ ಹತ್ತರ ಹರಿಯುವ ಚ್ಯವನೀಹೊಳೆಯ ಉತ್ತರತೀರದಲ್ಲಿ ಹನ್ನೆರಡು ಲಕ್ಷ ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳಿಂದಲೂ, ಹನ್ನೆರಡು ಲಕ್ಷ ಶಿವಗಾಯತ್ರಿ ಮಂತ್ರದಿಂದಲೂ, ಹನ್ನೆರಡು ಲಕ್ಷ ಶಿವ ಪಂಚಾಕ್ಷರೀ ಮಹಾಮಂತ್ರದಿಂದಲೂ ಹೋಮಹವನವನ್ನು ಕೇವಲ ಪಂಚ ಗವ್ಯ ಪಂಚಕಾಷ್ಟಗಳಿಂದ ವಿಧಾನೋಕ್ತವಾಗಿ ಹನ್ನೆರಡು ವರ್ಷಗಳ ವರೆಗೆ ನಡೆಯಿಸಿ, ಆ ಮೇಲೆ ಸಶಾಸ್ತ್ರಪೂರ್ಣಾಹುತಿಯಿಂದ ಆ ಯಜ್ಞವನ್ನು ಸಮಾಪ್ತಿ ಗೊಳಿಸಿ, ತನ್ನ ಪುತ್ರನಾದ ಋಚೀಕನಿಗೆ ಅಗ್ನಿಹೋತೃತ್ವವನ್ನು ಅನುಗ್ರಹಿಸಿದ ನೆಂದು ಅನ್ಯಪುರಾಣಾದಿಗಳಿಂದ ತಿಳಿಯಬರುತ್ತದೆ. ಚ್ಯವನಭಾರ್ಗವಮಹ ರ್ಷಿಯು ಆಚರಿಸಿದ ಪಂಚಬ್ರಹ್ಮಯಜ್ಞದ ಸ್ಥಳವನ್ನು ಮುಗಟಖಾನ ಹುಬ್ಬಳ್ಳಿಯ ಹತ್ತರ—ಅಚ್ಯುತರಾಯನಕಟ್ಟೆಯ ಹತ್ತರ ಮಲಾಪಹಾರಿಣೀ ನದಿಯ ಉತ್ತರದಡದಲ್ಲಿ ಈಗಲೂ ಪ್ರತ್ಯಕ್ಷ ನೋಡಬಹುದು- ಪ್ರತಿವರ್ಷ ಸವೆಯುತ್ತ ನಡೆದು ಈಗ ಸ್ವಲ್ಪ ಉಳಿದಿದೆ. ಇಂಥ ಪವಿತ್ರಭಸ್ಮವು ಮತ್ತೆ ಲ್ಲಿಯೂ ಸಿಗುವದಿಲ್ಲೆಂದು ತಿಳಿದು, ಮುಂದೆ ಬರತಕ್ಕ ಶಿವಶರಣರ ಶಿವ ಪೂಜೆಗೆ ಅವಶ್ಯಕವೆನಿಸುವದೆಂದು ಅದನ್ನು ಸಂಗ್ರಹಿಸಿ ಸವದತ್ತಿಯಲ್ಲಿರುವ ನಮ್ಮ ಸಿಂಹಾಸನಬ್ರಹನ್ಮಠದಲ್ಲಿ ವಿಭೂತಿಕಣಜವನ್ನು ಕಟ್ಟಿಸಿ ಇರಿಸಿದ್ದೇವೆ.

ಈ ಚ್ಯವನಭಾರ್ಗವಮಹರ್ಷಿಯಿಂದ, ಬ್ರಹ್ಮದೇವರ ಅನುಗ್ರಹದಿಂದ ಅಜ್ಞನೇ ಮೊಮ್ಮಗನಾಗಿ ಹುಟ್ಟಿದನು. ಇವನ ಹೆಸರು ಋಚೀಕ. ಈ ಋಚೀಕನ ಧರ್ಮಪತ್ನಿಯಾದ ಸತ್ಯವತಿದೇವಿಯ ಗರ್ಭದಿಂದ ಜಮದಗ್ನಿ ಮಹರ್ಷಿಯು ಜನಿಸಿದನು. ( ಈ ಸತ್ಯವತಿಯೂ, ದ್ವಾಪರಯುಗದಲ್ಲಾದ ವ್ಯಾಸಮಹರ್ಷಿಯ ತಾಯಿಯಾದ ಸತ್ಯವತಿಯೂ ಭಿನ್ನಭಿನ್ನರಾಗಿದ್ದಾರೆ). ಈ ಸತ್ಯವತಿಯ ವಿಷಯವಾಗಿ—

ತತಃ ಸತ್ಯವತೀಪುತ್ರಂಜನಯಾಮಾಸಭಾರ್ಗವಂ |
ತಪಸ್ಯಾಭಿರತಂ ನಿತ್ಯಂ ಜಮದಗ್ನಿಂ ಶತಾತ್ಮಕಂ |

**(ರೇಣುಕಾ ಮಹಾತ್ಮ್ಯೆ ೬ನೇ ಅಧ್ಯಾಯ ಶ್ಲೋ. ೧೫)**

ಅಂದರೆ ಋಚೀಕಮಹರ್ಷಿಯ ಧರ್ಮಪತ್ನಿಯಾದ ಸತ್ಯವತಿದೇವಿ ಯಿಂದ ಜಮದಗ್ನಿ ಮಹರ್ಷಿಯು ಜನಿಸಿದನು. ಅನಂತರ—

ಜಮದಗ್ನೇಸ್ತತಸ್ತಸ್ಯಾಂ ರೇಣುಕಾಯಾಂ ಸುರೋತ್ತಮಾಃ ||
ಬಭೂವುಃ ಪಂಚಪುತ್ರಾಸ್ತೇ ವಹ್ನೀಂದ್ರಾರ್ಕಾನಿಲಾಚ್ಯುತಾಃ ||
ವಸುನಾಮಾವನಲೋ ಜಜ್ಞೇವಾಯುರ್ವಿಶ್ವಾವಸುಃ ಸುತಃ ||
ಬೃಹದ್ಭಾನುಃ ಸ್ವಯಂ ಸೂರ್ಯಃ ಬೃಹತ್ಕಣ್ವಃ ಶತಕ್ರತುಃ ||
ಇತಿನಾಮಾನಿ ಪುತ್ರಾಣಾಂ ರೇಣುಕಾಯಾಃ ಶುಭಾನಿಚ ||

(ರೇಣುಕಾಮಹಾತ್ಮ್ಯೆ ೧೩ ಅಧ್ಯಾಯ ೧೮-೧೯-೨೦)

ಅಂದರೆ ಶ್ರೀ ರೇಣುಕಾದೇವಿಯ ಗರ್ಭದಿಂದ ಜಮದಗ್ನಿಮಹರ್ಷಿಯಿಂದ ಅಗ್ನಿ, ಇಂದ್ರ, ಸೂರ್ಯ, ವಾಯು, ನಾರಾಯಣರು ಪುತ್ರರಾಗಿ ಜನಿಸಿದರು. ಅಗ್ನಿಯು ವಸು ಎಂಬ, ವಾಯು ವಿಶ್ವಾವಸು ಎಂಬ, ಸೂರ್ಯನು ಬೃಹದ್ಭಾನುವೆಂಬ, ಇಂದ್ರನು ಬೃಹತ್ಕಣ್ವನೆಂಬ ಹೆಸರಿನಿಂದ ಮೊದಲು ನಾಲ್ಕು ಪುತ್ರರು ಜನಿಸಿದರು. ನಾರಾಯಣನು ಐದನೇ ಪುತ್ರನಾಗಿ ಜನಿಸಿದನು. ಇವನೇ ಪರಶುರಾಮನು, ಈ ಪರಶುರಾಮನು ಆಜನ್ಮಬ್ರಹ್ಮಚಾರಿಯಾಗಿ ಉಳಿದನು. ಉಳಿದ ನಾಲ್ವರಲ್ಲಿ ವಸುವಿನಿಂದ ಪರಶುಋಷಿಯೂ, ವಿಶ್ವಾವಸುವಿನಿಂದ ಗೂಢಋಷಿಯೂ, ಬೃಹದ್ಭಾನುವಿನಿಂದ ಲಿಂಗಋಷಿಯೂ, ಬೃಹತ್ಕಣ್ವನಿಂದ ತೃಪ್ತಋಷಿಯೂ ಜನಿಸಿದರು. ಈ ಪರಶುಋಷಿ ಮೊದಲಾದ ಶ್ರೀ ರೇಣುಕಾದೇವಿಯ ಮೊಮ್ಮಕ್ಕಳು ಈ ನಾಲ್ವರು ತಮ್ಮ ತಂದೆಯವರ ಕೂಡ ಶ್ರೀ ರೇಣುಕಾದೇವಿಯ ಸೇವಾಸತ್ಕಾರ ಮಾಡುವದಕ್ಕಾಗಿ ಉಗರಗೊಳ್ಳದಲ್ಲಿಯೇ ನಿಂತುಕೊಂಡರು. ಪೂರ್ವದಲ್ಲಿ ರೇಣುಕಾದೇವಿಯು ನದಿಯಲ್ಲಿ ಜಲಕ್ರೀಡೆಯನ್ನು ಮಾಡುತ್ತಿರುವ ಸಮಯದಲ್ಲಿ ಗಂಧರ್ವದಂಪತಿಗಳನ್ನು ನೋಡಿ ಚಂಚಲಚಿತ್ತಳಾದದ್ದನ್ನು ನೋಡಿ ಜಮದಗ್ನಿಮಹರ್ಷಿಯು ಇವಳನ್ನು ಕೊಲ್ಲಲಿಕ್ಕೆ ಮೊದಲಿನ ಪುತ್ರರಾದ ವಸು ಮೊದಲಾದವರಿಗೆ ಆಜ್ಞಾಪಿಸಲು ಅವರು ತಮ್ಮನ್ನು ಹೆತ್ತತಾಯಿಯನ್ನು ಕೊಲ್ಲುವದು ಮಹಾಪಾಪವೆಂದು ತಂದೆಯ ಅಪ್ಪಣೆಯನ್ನು ಮೀರಿ ಅವನ ಶಾಪದಿಂದ ಮರಣಹೊಂದಿದರು. ಪರಶುರಾಮನೇ ತಂದೆಯ ಅಪ್ಪಣೆಯನ್ನು ಶಿರಸಾವಹಿಸಿ ತಾಯಿಯ ಶಿರಚ್ಛೇದನ ಮಾಡಿದನು. ಅದಕ್ಕಾಗಿ ಜಮದಗ್ನಿಯು ಸಂತುಷ್ಟನಾಗಿ, ನೀನಾವ ವರವನ್ನು ಬೇಡುತ್ತೀ ಬೇಡಿಕೋ ಎಂದು ಕೇಳಲಾಗಿ, ಆಗ ಪರಶುರಾಮನು, ನನ್ನ ನಾಲ್ವರು ಅಣ್ಣಂದಿರನ್ನೂ ಜನನಿಯಾದ ರೇಣುಕಾದೇವಿಯನ್ನೂ ಸಜೀವ ಮಾಡಬೇಕು. ಇನ್ನು ಮೇಲೆ ನೀವು ಸಿಟ್ಟನ್ನು ತ್ಯಜಿಸಬೇಕೆಂದು ವರವನ್ನು

ಬೇಡಿದನು. ಅದರಂತೆ ಎಲ್ಲರಿಗೂ ಜೀವದಾನಮಾಡಿ ಸಿಟ್ಟನ್ನು ಬಿಟ್ಟು ಕೊಟ್ಟನು. ಆದುದರಿಂದ ರೇಣುಕಾದೇವಿಯು ತನ್ನ ವಧವನ್ನು ಮಾಡದೆ ಮರಣಕ್ಕೀಡಾದ ವಸು ಮೊದಲಾದ ನಾಲ್ವರು ಪುತ್ರರ ವಿಷಯದಲ್ಲಿಯೂ, ಅವರ ಮಕ್ಕಳಾದ ಲಿಂಗಋಷಿ ಮೊದಲಾದವರನ್ನು ತನ್ನ ಪೂಜಾಸೇವಾ ಸತ್ಕಾರಗಳನ್ನು ಮಾಡುವದಕ್ಕಾಗಿ ಪ್ರೇಮಾನುಗ್ರಹವಿತ್ತು, ತನ್ನ ಆಶ್ರಮದ ಗ್ರಾಮವಾದ ಉಗರಗೊಳ್ಳದಲ್ಲಿಯೇ ಇರಲಿಕ್ಕೆ ಅಪ್ಪಣೆಯಿತ್ತಳು. ಅಂದಿನಿಂದ ಅವರ ವಂಶದವರು ಲಿಂಗರಾಶಿ, ಗೂಢರಾಶಿ, ಪರಶುರಾಶಿ, ತೃಪ್ತರಾಶಿ ಎಂಬ ಹೆಸರಿನಿಂದ ಈಗಲೂ ವಾಸಿಸುತ್ತಿರುವದು ಈ ಮನೆತನಗಳಲ್ಲಿ ಶಾಖಾ ಪ್ರಶಾಖಾ ಭೇದದಿಂದ ನಾಲ್ವತ್ತರ ಮೇಲ್ಪಟ್ಟು ಶ್ರೀ ರೇಣುಕಾದೇವಿಯ ಪೂಜಾರಿ ಮನೆತನಗಳು ಇರುವವು.

## ಐತಿಹಾಸಿಕ ವಿಷಯವು

ಭಗವಾನ್ ಬುದ್ಧನ ಅವತಾರಕ್ಕಿಂತ ಪೂರ್ವದ ಇತಿಹಾಸಕ್ಕೆ ಪ್ರಾಚೀನ ಇತಿಹಾಸವೆಂತಲೂ ಇತ್ತೀಚಿನ ಇತಿಹಾಸಕ್ಕೆ ಅರ್ವಾಚೀನ ಇತಿಹಾಸವೆಂತಲೂ ಹೇಳುವರು. ರಾಮಾಯಣ ಮಹಾಭಾರತ ಶಿವರಹಸ್ಯಗಳು ಪ್ರಾಚೀನ ಇತಿಹಾಸದಲ್ಲಿ ಶಿಲಾಶಾಸನ, ತಾಮ್ರಶಾಸನ ಮೊದಲಾದವುಗಳು ಅರ್ವಾಚೀನ ಇತಿಹಾಸದಲ್ಲೂ ಪ್ರಮಾಣಗ್ರಂಥಗಳಾಗಿರುತ್ತವೆ. ಶ್ರೀ ರೇಣುಕಾದೇವಿಯ ವಿಷಯದಲ್ಲಿ ಪ್ರಾಚೀನ ಇತಿಹಾಸದಲ್ಲಿ ಅನೇಕ ಸಂಗತಿಳು ಕಂಡುಬರುವವು. ಆದರೆ ಅರ್ವಾಚೀನ ಇತಿಹಾಸ ಸಾಧನಗಳಾದ ಶಿಲಾಲಿಪಿ, ತಾಮ್ರಶಾಸನ ಮೊದಲಾದವುಗಳು ಶ್ರೀ ರೇಣುಕಾದೇವಿಯ ವಿಷಯದಲ್ಲಿ ತೀರ ಕಡಿಮೆ ಪ್ರಮಾಣದಲ್ಲಿ ಸಿಗುವವು. ಸರಕಾರದಿಂದ ಪ್ರಕಾಶಮಾಡಲ್ಪಟ್ಟ ಕರ್ಣಾಟಕ ಗ್ಯಾಜಿಟಿಯರದ ೫೮೫—೫೮೭—೫೮೭ನೇ ಪುಟಗಳಲ್ಲಿ ಎಲ್ಲಮ್ಮನ ಗುಡ್ಡದ ವಿಷಯದಲ್ಲಿ ಐತಿಹಾಸಿಕ ಪ್ರಮಾಣಗಳೇ ಮುಖ್ಯವಾದವುಗಳು.

ವಿಜಯನಗರದ ಕೃಷ್ಣಮಹಾರಾಜನ ಪಾಳೇಗಾರನಾದ ಬಾಗಿಬೊಮ್ಮಪ್ಪ ನಾಯಕನೆಂಬವನು, ಶಕ ೧೪೩೬ರಲ್ಲಿ ಎಲ್ಲಮ್ಮದೇವಿಯ ಮಂದಿರದ ಪವಳಿಯ ದಕ್ಷಿಣದಿಕ್ಕಿನ ಮಹಾದ್ವಾರದ ಮೇಲಿರುವ ನಗಾರಖಾನೆಯನ್ನು ಕಟ್ಟಿಸಿದ ನೆಂದು ಅಲ್ಲಿರುವ ಶಿಲಾಲೇಖದಿಂದ ತಿಳಿಯುತ್ತದೆ. ಆ ಶಿಲಾಲೇಖದಲ್ಲಿರುವ "ಜತ್ತಕಮಹಾಮಾಯಿ" ಎಂಬ ಹೆಸರಿನಿಂದ ಈ ದೇವಿಯು ದ್ರಾವಿಡ ದೇವತೆ ಯೆಂದು ಬರೆದಿದ್ದಾರೆ. ಹಿಂದು ಆರ್ಯದೇವತೆಯರ ಕೈಯಲ್ಲಿರುವಂತೆ ಈ

ದೇವಿಯ ಕೈಗಳಲ್ಲಿ ಆಯುಧಗಳಿಲ್ಲೆಂದು ಅದಕ್ಕೊಂದು ಕಾರಣವನ್ನು ತೋರಿಸಿದ್ದಾರೆ. ಎಲ್ಲಮ್ಮ ಜತ್ತಕಮಹಾಮಾಯಿಯೆಂಬ ಶಬ್ದಗಳಾದರೂ ಸಂಸ್ಕೃತ ಶಬ್ದಗಳಾಗದೆ ಇರುವವರಿಂದ ದ್ರಾವಿಡ ದೇವತೆಯೆನ್ನಲಿಕ್ಕೆ ಇದೊಂದು ಕಾರಣವೆಂದು ಬರೆದಿದ್ದಾರೆ. ಇದು ತಪ್ಪು ತಿಳುವಳಿಕೆಯು. ಮುನಿಪತ್ನಿಯಾದ ಎಲ್ಲಮ್ಮನಿಗೆ ಆಯುಧಗಳ ಅವಶ್ಯಕತೆಯಿರುವದಿಲ್ಲೆಂಬುದು ಪರದೇಶದ ಇತಿಹಾಸ ಶೋಧಕರಿಗೇನುಗೊತ್ತು? ಎಲ್ಲಮ್ಮ ಎಂಬ ಶಬ್ದವು ಜಗದಂಬಾ ಎಂಬ ಶಬ್ದದ ತದ್ಭವವಾಗಿದ್ದು ಎಲ್ಲರಿಗೆ ಅಮ್ಮಾ, ಎಲ್ಲಮ್ಮಾ; ಜಗತ್ತಿಗೆ ಅಂಬಾ ಜಗದಂಬಾ ಎಂಬ ಸಮಾನಾರ್ಥ ವಾಚಕಗಳಾದ ಇವೆರಡು ಹೆಸರುಗಳಿಂದ ಈ ದೇವಿಯು ಆರ್ಯದೇವತೆಯಲ್ಲದೆ ದ್ರಾವಿಡದೇವತೆಯಲ್ಲ. ಜತ್ತಕ ಮಹಾಮಾಯಿ ಎಂಬ ಶಬ್ದದಲ್ಲಿ ಜತ್ತಕ ಎಂದು ತಪ್ಪುಬಿದ್ದಿದೆ. ಲೇಖಕರಿಗೆ ಹಾಗೆ ಆಗಲು ಸಂಭವವುಂಟು, ಅದು ಜಗತ್ತ್ಯಕ್ಕ ಮಹಾಮಾಯಿ ಎಂದಿರಬೇಕು. "ಗ" ಹೋಗಿದೆ, ಅದಾವದರೂ ಜಗದಂಬಾ ಶಬ್ದದ ಸಮಾನಾರ್ಥಕವಾಗಿದೆ. ಇವೆಲ್ಲ ವಿಷಯಗಳನ್ನು ವಿಚಾರಮಾಡಿ ನೋಡಿದರೆ ಶ್ರೀ ರೇಣುಕಾದೇವಿಯ ವಿಗ್ರಹವೂ, ಆ ವಿಗ್ರಹಕ್ಕೆ ಸಂಬಂಧಪಟ್ಟ ಜಮದಗ್ನಿ, ಪರಶುರಾಮ, ದತ್ತಾತ್ರೇಯ ಮೊದಲಾದ ಆ ಕ್ಷೇತ್ರದಲ್ಲಿರತಕ್ಕ ದೇವತಾ ವಿಗ್ರಹಗಳು ಆರ್ಯದೇವತಾ ಸ್ವರೂಪವಾದ್ದರಿಂದ ದ್ರಾವಿಡ ದೇವತೆಯೆನ್ನಲಿಕ್ಕೆ ಎಳ್ಳಷ್ಟೂ ಆಸ್ಪದವಿಲ್ಲ.

ಸಾರಾಂಶವೇನಂದರೆ, ನಮ್ಮ ಕರ್ನಾಟಕದಲ್ಲಿರತಕ್ಕ ಶ್ರೀ ರೇಣುಕಾ ಕ್ಷೇತ್ರ (ಎಲ್ಲಮ್ಮನಗುಡ್ಡ)ವು ವೇದಕಾಲದಿಂದ ಪ್ರಸಿದ್ಧವೂ, ಪ್ರಾಚೀನವೂ ಪವಿತ್ರವೂ, ಆಗಿದ್ದು, ಇದೇ ಶ್ರೀ ರೇಣುಕಾದೇವಿಯು ನೆಲಸಿದ ಪುಣ್ಯಸ್ಥಳವೆಂದೂ ಐತಿಹಾಸಿಕ ಜಾಗೃತಸ್ಥಾನವೆಂದೂ ತಿಳಿದು ಸರ್ವರೂ ಶ್ರೀ ರೇಣುಕಾ ದೇವಿಯಲ್ಲಿ ಭಕ್ತಿಯನ್ನಿಟ್ಟು ಆಚರಿಸಬೇಕೆಂದು ಹೇಳಿ ಈ ಚಿಕ್ಕದಾದ ಮುನ್ನುಡಿಯನ್ನು ಮುಗಿಸುತ್ತೇವೆ.

ತಮ್ಮ

ಶ್ರೀ ರೇಣುಕಾ ಕ್ಷೇತ್ರದ ಸ್ಥಾನಾಚಾರ್ಯರಾದ,
ಪಂಡಿತತರ್ಕತೀರ್ಥಾದಿ ಬಿರುದಾಂಕಿತ,
**ಶ್ರೀ ನೀಲಕಂಠ ಶಿವಾಚಾರ್ಯ ಮಹಾಸ್ವಾಮಿಗಳು,**
**ಸಿಂಹಾಸನಬೃಹನ್ಮಠ, ಹೂಲಿ (ಎಲ್ಲಮ್ಮನಗುಡ್ಡ)**

**ದಿನಾಂಕ ೫—೮—೫೭ ಇಸ್ವಿ.**

### ಈ ಪುರಾಣ ಶೋಧಕರಾದ
### ಶ್ರೀ ಗೋವಿಂದಗೌಡರು ಪರಶುರಾಮಗೌಡರು ಗೂಡಮುಷಿ
### ವ ರೇಣಕಿಗೌಡರು

# ಸಂಕ್ಷಿಪ್ತ ಜೀವನ ಚರಿತ್ರೆ

ಶ್ರೀ ರೇಣುಕಾಕ್ಷೇತ್ರವು ತಪಸ್ವಿಗಳ ವಾಸಕ್ಕೆ ಮಣಿಯಾಗಿದೆ. ಈ ಕ್ಷೇತ್ರದ ಹದ್ದಿಯಲ್ಲಿದ್ದ ಉಗರಗೋಳ ಗ್ರಾಮವೇ ಶ್ರೀಗೋವಿಂದಗೌಡರ ಜೀವನಸ್ಥಾನವು. ಶ್ರೀ ಪರಶುರಾಮಗೌಡರು ರೇಣಮ್ಮನವರು ಈ ದಂಪತಿಗಳ ಉದರದಿಂದ ಶ್ಯಾ. ಶಕ ರಲ್ಲಿ ಜನಿಸಿದರು. ಶ್ರೀ ಗೋವಿಂದಗೌಡರ ತಂದೆ ತಾಯಿಗಳು ಶ್ರೀ ರೇಣುಕಾದೇವತೆಯ ಅರ್ಚಕರು. ಭಕ್ತಿಯಲ್ಲಿ ಶಿರೋಮಣಿ ಗಳು. ಪುರಾಣ ಶ್ರವಣಾದಿಗಳಲ್ಲಿ ಅವರಿಗಿದ್ದ ಶ್ರದ್ಧೆ, ಭಕ್ತಿ, ವಿಶ್ವಾಸ, ಪ್ರೇಮ ಗಳು ಅನಂತವಾದುವು, ಅಚಲವಾದುವು. ಮತ್ತು ಸುಶೀಲರೂ ಗುರು ಭಕ್ತರೂ ಸತ್ಕರ್ಮನಿಷ್ಠರೂ ಆದ ಇಂಥ ತಂದೆತಾಯಿಗಳ ಸುಸಂಸ್ಕೃತ ವಾತಾ ವರಣದಲ್ಲಿ ಬೆಳೆದ ಶ್ರೀಗೋವಿಂದಗೌಡರ ಮನಸ್ಸು ಪುರಾಣಶ್ರವಣದ ಕಡೆಗೂ, ಪುಣ್ಯತೀರ್ಥಕ್ಷೇತ್ರಗಳ ದರ್ಶನದ ಕಡೆಗೂ ಸತ್ಕರ್ಮದ ಕಡೆಗೂ ತಿರುಗಿ ದುದು ಏನಾಶ್ಚರ್ಯ. ಇವರು ಶ್ರೀ ರೇಣುಕಾದೇವತೆಯ ಪೂಜೆಮಾಡುವ ದಲ್ಲದೆ, ವಿಶೇಷ ಭಕ್ತಿಯಿಂದ ಯಾವಾಗಲೂ ಶ್ರೀ ಪರಶುರಾಮದೇವರ ಪೂಜೆ ಯನ್ನು ಮಾಡುತ್ತಿದ್ದರು. ಇವರಿಗೆ ಸಂಸ್ಕೃತ, ಹಿಂದಿ, ಮಹಾರಾಷ್ಟ್ರ ಕರ್ನಾಟಕ ಭಾಷೆಗಳ ಜ್ಞಾನವಿತ್ತು. ಈ ಭಾಷೆಗಳಲ್ಲಿ ಶ್ರೀ ರೇಣುಕಾದೇವ ತೆಯ ಪುರಾಣವನ್ನು ಕೆಲವರು ಜಾತಿಮತ್ಸರ್ಯದಿಂದಲೋ ಅಥವಾ ವೇದ ವ್ಯಾಸಕೃತ ಮೂಲಪುರಾಣ ಸಿಗದ್ದರಿಂದಲೋ, ಅಬದ್ಧ ಬರೆದದ್ದನ್ನು ಓದಿ ನೋಡಿ ಇವುಗಳನ್ನು ಶ್ರೀ ರೇಣುಕಾದೇವತೆಯ ಭಕ್ತರು ಓದುವದರಿಂದ ಶ್ರೀ ರೇಣುಕಾದೇವತೆಯಲ್ಲಿ ಇದ್ದ ಅವರ ಭಕ್ತಿಯು ಕಡಿಮೆಯಾಗಿ ಇಹಪರ ಸುಖಗಳನ್ನು, ಕಡೆಯಲ್ಲಿ ಆಗುವ ಮುಕ್ತಿಯನ್ನು ಕಳಕೊಂಡು ದುಃಖಪಡುವ ರೆಂದು ತಿಳಿದು ಶ್ರೀ ರೇಣುಕಾದೇವತೆಯ ಮೂಲ ಪುರಾಣವನ್ನು ಶೋಧ ಮಾಡುವ ಇಚ್ಛೆಯಿಂದ ಬೆಳಗಾಂವ, ಬೆಂಗಳೂರು, ಪುಣೆ, ಮುಂಬಯಿ, ಬನಾರಸ ನಗೈರೆ ಪಟ್ಟಣಗಳಲ್ಲಿಯ ಪುಸ್ತಕಾಲಯಗಳಿಂದ ಸಾವಿರಾರು ರೂಪಾಯಿಯ

ಪುಸ್ತಕಗಳನ್ನು ತರಿಸಿ ಆ ಪುಸ್ತಕಗಳಲ್ಲಿಯು ಶ್ರೀ ರಾಮೇಶ್ವರ, ಶ್ರೀ ಗೋಕರ್ಣ, ಶ್ರೀ ಹಂಪಿ, ಶ್ರೀ ಶೈಲ, ಶ್ರೀ ಭೀಮಾಶಂಕರ, ಶ್ರೀ ನಾಸಿಕ, ತ್ರಂಬಕೇಶ್ವರ, ಶ್ರೀ ಓಂಕಾರೇಶ್ವರ, ಶ್ರೀ ಉಜ್ಜನಿ ಮಹಾಕಾಳೇಶ್ವರ, ಶ್ರೀ ಪ್ರಯಾಗ ತ್ರಿವೇಣಿ ಶ್ರೀ ಕೇದಾರೇಶ್ವರ, ಶ್ರೀ ಬದ್ರಿನಾರಾಯಣ, ಶ್ರೀ ಗಂಗೂತ್ರಿಯಲ್ಲಿ ಶ್ರೀ ಗಂಗಾ ದೇವತೆಯ ಗುಡಿಯಲ್ಲಿ ಒಂದೇ ಆಸನದಿಂದ ಸತತ ಇಪ್ಪತ್ತನಾಲ್ಕು ತಾಸು ಜಪಮಾಡಿರುವರು. ಆಗ ಇದು ಎಷ್ಟು ಕಠಿಣ ತಪಸ್ಸು ಇದರಂತೆ ಶ್ರೀ ಗಂಗೂತ್ರಿ, ವಗೈರೆ ಆ ಆ ತೀರ್ಥಗಳ ವಿಧಿಪ್ರಕಾರ ಆ ಆ ಕ್ಷೇತ್ರಗಳಲ್ಲಿ ಆ ಆ ತೀರ್ಥಗಳಲ್ಲಿ ಸ್ನಾನಮಾಡುತ್ತಾ ಆ ಆ ಕ್ಷೇತ್ರಗಳಲ್ಲಿ ಆ ಆ ಕ್ಷೇತ್ರಗಳ ವಿಧಿ ಪ್ರಕಾರ ಆ ಆ ಜ್ಯೋತಿರ್ಲಿಂಗಗಳ ದೇವರುಗಳ ದರ್ಶನ ಮಾಡಿಕೊಳ್ಳುತ್ತಾ ಆ ಆ ತೀರ್ಥ, ಆ ಆ ಕ್ಷೇತ್ರಗಳಲ್ಲಿಯೂ ಶ್ರೀ ರೇಣುಕಾದೇವತೆಯ ಮೂಲ ಪುರಾಣವನ್ನು ಶೋಧಮಾಡುತ್ತಾ ಇದೇ ಪ್ರಕಾರ ಎಂಟತ್ತು ಸಾರೆ ಶ್ರೀ ಕಾಶೀ ಯಾತ್ರೆಯನ್ನು ಮಾಡುತ್ತಾ ಇರಲಾಗಿ ಕಡೆಯಲ್ಲಿ ಶ್ರೀ ವೇದವ್ಯಾಸಕೃತ ಸ್ಕಂದ ಪುರಾಣಾಂತರ್ಗತ ಸಹ್ಯಾದ್ರಿಖಂಡವು ಶ್ರೀ ಕಾಶೀಕ್ಷೇತ್ರದಲ್ಲಿ ದೊರೆಯಿತು. ಆ ಸಹ್ಯಾದ್ರಿಖಂಡದಲ್ಲಿಯ ಶ್ರೀ ರೇಣುಕಾದೇವತೆಯ ಪುರಾಣವನ್ನು ಓದಿ ನೋಡಿ ಬಹಳ ಸಂತೋಷಪಟ್ಟು ಈ ಪುರಾಣವನ್ನು ಸಂಸ್ಕೃತ ಹಿಂದಿ ಮಹಾ ರಾಷ್ಟ್ರ ಕರ್ನಾಟಕ ವಗೈರೆ ಭಾಷಾಗಳಲ್ಲಿ ಛಾಪಿಸಿ ಶ್ರೀ ರೇಣುಕಾದೇವತೆಯ ಎಲ್ಲ ಭಕ್ತರಿಗೆ ದೊರೆಯುವಂತೆ ಮಾಡಿದರೆ ಅವರ ಎಲ್ಲ ಕಷ್ಟಗಳು ದೂರಾಗಿ ಸುಖವು ಉಂಟಾಗುವದೆಂದು ತಿಳಿದು, ಶ್ರೀ ಕಾಶೀಕ್ಷೇತ್ರದಲ್ಲಿ ಪಂಡಿತರ ಕಡೆಗೆ ಸಹ್ಯಾದ್ರಿಖಂಡದೊಳಗಿನ ಶ್ರೀ ರೇಣುಕಾದೇವತೆಯ ಪುರಾಣವನ್ನು ಸಂಸ್ಕೃತ ಭಾಷಾದಿಂದ ಬೇರೆ ಪ್ರತಿ ಮಾಡಲಿಕ್ಕೆ ಕೊಟ್ಟಿದ್ದರು. ದೈವಗತಿಯಿಂದ ಅವರಿಗೆ ಅಜಾರಿ ಆಯಿತು. ಶ್ರೀ ಕಾಶಿಕ್ಷೇತ್ರದಲ್ಲಿಯಿದ್ದುಕೊಂಡು ಔಷಧೋಪಚಾರ ವನ್ನು ನಡಿಸಿದರು. ಅದರಿಂದ ಅಜಾರಿಯು ಕಡಿಮೆಯಾಗದೆ ಹೆಚ್ಚಾಗುತ್ತ ನಡೆಯಿತು. ಇದೇ ಕಾಲದಲ್ಲಿ ಗ್ರಹಣವಿತ್ತು. ಈ ಗ್ರಹಣದ ಸುದ್ದಿಯನ್ನು ಕೇಳಿಕೊಂಡು ನಾನು ಗ್ರಹಣಕಾಲದಲ್ಲಿ ಶ್ರೀ ಗಂಗಾಸ್ನಾನ ಮಾಡಬೇಕು. ತೊಟ್ಟಿಲವನ್ನು ತರಿಸಿರಿ ಅಂತಾ ಹೇಳಿದರು. ಆಗ ಮನಿಯವರು ಈಗ ಅಜಾರಿ ಬಹಳವಿದೆ, ತಮಗೆ ಏಳಲಿಕ್ಕೂ ಕೂಡ್ರಲಿಕ್ಕೂ ಬರುವದಿಲ್ಲಾ ಬೇಡ ಅಂತಾ ಎಷ್ಟು ಆಗ್ರಹಮಾಡಿದರೂ, ಹೇಳಿಕೊಂಡರೂ, ಕೇಳದಲೆ ತೊಟ್ಟಿಲ ವನ್ನು ತರಿಸಿಕೊಂಡು ಅದರಲ್ಲಿ ಕೂತು ಆಳುಗಳ ಕಡೆಯಿಂದ ಹೊರಿಸಿಕೊಂಡ.

ಎಡಬಲಕ್ಕೆ ಭಿಕ್ಷುಕರಿಗೆ ದಾನಕೊಡುತ್ತಾ, ಶ್ರೀ ಗಂಗೆಯ ದಂಡೆಯ ವರೆಗೆ ಹೋದರು. ಅಲ್ಲಿ ವಿಶೇಷ ಗದ್ದಲವಿದ್ದದರಿಂದ ಒಬ್ಬ ಪೋಲೀಸರ ಸಹಾಯದಿಂದ ಶ್ರೀ ಗಂಗಾದವರೆಗೂ ಹೋಗಿ, ಅಲ್ಲಿ ಇಬ್ಬರು ರಟ್ಟೆಹಿಡಿದುಕೊಂಡು ಹೋಗಿ ಶ್ರೀ ಗಂಗಾಸ್ನಾನಮಾಡಿಸಿದರು. ಹಾಗೆ ಅವರು ರಟ್ಟೆ ಹಿಡಿದುಕೊಂಡು ನಿಂತರು. ಇವರು ಗ್ರಹಣಬಿಡುವ ವರೆಗೂ ಶ್ರೀ ಗಂಗಾದಲ್ಲಿ ನಿಂತುಕೊಂಡು ಜಪ ಮಾಡಿದರು. ಗ್ರಹಣಬಿಟ್ಟ ನಂತರ ಪುನಃ ಶ್ರೀಗಂಗಾಸ್ನಾನಮಾಡಿ ಮನೆಗೆ ಬರುವ ವರೊಳಗಾಗಿ ಡಬಲ್ ನಿಮೋನಿಯಾ ರೋಗ ಆಯಿತು. ಅದರಿಂದ ಶ್ರೀಕಾಶೀ ಕ್ಷೇತ್ರದಲ್ಲಿ ತಾ|| ೨೨-೮-೧೯೨೪ನೇ ಇಸವಿ ಗೋಕುಲಾಷ್ಟಮಿ ದಿವಸ ಮುಕ್ತ ರಾದರು. ಆದರೆ ಇವರು ಶ್ರೀ ಗಂಗೋತ್ರಿಯಲ್ಲಿ ಮಾಡಿದ ಕಠಿಣ ತಪಸ್ಸು ಗ್ರಹಣಕಾಲದಲ್ಲಿ ಶ್ರೀ ಕಾಶಿಕ್ಷೇತ್ರದಲ್ಲಿ ಮಾಡಿದ ಅಂಥಾ ಕಠಿಣ ತಪಸ್ಸು ಶ್ರೀ ರೇಣುಕಾದೇವತೆಯ ಮೂಲಪುರಾಣವನ್ನು ವಿಶೇಷ ಶ್ರಮಪಟ್ಟು ಶೋಧ ಮಾಡಿದ್ದು, ಇವನ್ನೆಲ್ಲವನ್ನು ನೋಡುತ್ತಿರಲಿಕ್ಕಾಗಿ ಇವರ ಈ ಕೃತಿ ಅಭಿನಂದ ನೀಯವಾಗಿರುವದು. ಇವರು ಶ್ರೀ ರೇಣುಕಾದೇವತೆಯ ಅತ್ಯಂತ ಪ್ರೀತಿಯ ಅರ್ಚಕರು. ಸತ್ಕರ್ಮದಲ್ಲಿ ವಿಶೇಷ ಶ್ರದ್ಧೆಯುಳ್ಳವರು. ಸದಾಚಾರ ಸಂಪನ್ನರು. ವೇದಾಂತ ತತ್ವ ಅರಿತವರು. ಸತ್ಪುರುಷರಲ್ಲಿ ಅಚಲ ಶ್ರದ್ಧೆ ವಿಶ್ವಾಸಗಳುಳ್ಳವರು. ಅತಿಥಿಸೇವಾನಿರತರೂ ಆದ ಗೋವಿಂದಗೌಡರಿಗೆ ಶ್ರೀ ರೇಣುಕಾ ಎಲ್ಲಮ್ಮ ದೇವತೆಯು ಮುಕ್ತಿಯನ್ನು ಕೊಡಲೆಂದು ನಾವೆಲ್ಲರೂ ಪ್ರಾರ್ಥಿಸುವಾ.

ಶ್ರೀ ರೇಣುಕಾದೇವತೆಯ ಮೂಲಪುರಾಣಶೋಧಕರ ತಮ್ಮಂದಿ ರಾದ ಶ್ರೀ ಶಿವನಗೌಡರು ಪರಶುರಾಮಗೌಡರು ಗೂಢಮಠಿ ಇವರು ಈ ಪುರಾಣ ಪ್ರಕಾಶಕರು. ಇವರು ಶ್ರೀ ರೇಣುಕಾದೇವತೆಯ ಪೂಜೆಮಾಡು ವರಲ್ಲದೆ ಯಾವಾಗಲೂ ವಿಶೇಷ ಭಕ್ತಿಯಿಂದ ಶ್ರೀ ಪರಶುರಾಮದೇವರ ಪೂಜೆಯನ್ನೂ ಮಾಡುತ್ತಿರುವರು. ಇವರು ಶ್ರೀ ರೇಣುಕಾ ಎಲ್ಲಮ್ಮ ದೇವ ತೆಯ ಪುರಾಣವನ್ನು ಈ ಕರ್ನಾಟಕ ಭಾಷೆಯಲ್ಲಿ ಪಂಡಿತರ ಕಡೆಯಿಂದ ಬರೆಯಿಸಿ ಛಾಪಿಸಿದ್ದರ ಫಲವೇ ಇದು. ನಮ್ಮೆಲ್ಲರ ಕೈಸೇರಿರುವ ಪುರಾಣವು ಇದರಂತೆ ಮಹಾರಾಷ್ಟ್ರಭಾಷೆಯುಳ್ಳ ಶ್ರೀ ರೇಣುಕಾದೇವತೆಯು ಎಲ್ಲ ಭಕ್ತರ ಕಷ್ಟಗಳನ್ನು ದೂರಮಾಡುವ ಇಚ್ಛೆಯಿಂದ ಮಹಾರಾಷ್ಟ್ರದಲ್ಲಿಯು ಮತ್ತು ಶ್ರೀ ರೇಣುಕಾದೇವತೆಯ ಅವತಾರ ಎಲ್ಲಾ ಮಹಿಮೆಯ ಬಣ್ಣ ಫೋಟೋ

ಗಳನ್ನು ಛಾಪಿಸಬೇಕೆಂದು ಅವರ ಇಚ್ಛಾ ಇದೆ. ಈ ಪ್ರಕಾರ ನಮ್ಮೆಲ್ಲರಿಗೂ ಸುಖವನ್ನುಂಟುಮಾಡಿದ ಇವರ ಈ ಇಚ್ಛೆಯನ್ನು ಪೂರ್ಣಮಾಡಿ ಇವರಿಗೆ ಮುಕ್ತಿಯನ್ನು ಕೊಡಲೆಂದು ನಾವೆಲ್ಲರೂ ಶ್ರೀ ರೇಣುಕಾ ಎಲ್ಲಮ್ಮ ದೇವತೆಯನ್ನು ಪ್ರಾರ್ಥಿಸುವಾ.

---

ಸಂಕ್ಷಿಪ್ತ ಜೀವನಚರಿತ್ರೆ ಬರೆದವರು—

ತಮ್ಮ

ದಿನಾಂಕ ೧೦-೬-೧೯೫೭

ಎಲ್ಲಪ್ಪಗೌಡ ಪರಶುರಾಮಗೌಡ ತೃಪ್ತಖಿ ಷಿ

ಉಗರಗೊಳ್ಳ (ಎಲ್ಲಮ್ಮನ ಗುಡ್ಡ)

# ಈ ಪುರಾಣಕ್ಕೆ ಧನಸಹಾಯ ಮಾಡಿದವರು

೧. ಶ್ರೀ| ಚೆನ್ನಪ್ಪ ಫಕೀರಪ್ಪ ಹುಯಿಲಗೋಳ, ಗದಗ.
೨. ಶ್ರೀಮತಿ ಲಕ್ಷ್ಮೀಬಾಯಿ ಕೋಂ, ಕೃಷ್ಣಪ್ಪ ಕರಡಿ, ಇಳಕಲ್ಲ.
೩. ಶ್ರೀ| ಶಿವಮೂರ್ತೆಪ್ಪ ಫಕೀರಪ್ಪ ಹುಯಿಲಗೋಳ, ಗದಗ.
೪. ಶ್ರೀ| ಭಾಸ್ಕರಪ್ಪ ಕೇಶವಪ್ಪ ಹುಯಿಲಗೋಳ, ಗದಗ.
೫. ಶ್ರೀ| ಪಾಂಡಪ್ಪ ದುಂಡಪ್ಪ ಹುಯಿಲಗೋಳ, ಗದಗ.
೬. ಶ್ರೀ| ಚಾಯಪ್ಪ ಸಣತಮ್ಮಪ್ಪ ಹುಯಿಲಗೋಳ, ಬೆಳಗಾಂವ.
೭. ಶ್ರೀ| ತುಳಜನಸಾ ನಾರಾಯಣಸಾ ಹಬೀಬ, ಹುಬ್ಬಳ್ಳಿ.
೮. ಶ್ರೀ| ಲಕ್ಷ್ಮಣರಾವ ಭೀಮರಾವ ಬೆಳಮಕರ, ಟಿಂಬರ ಮರ್ಚಂಟ ಹುಬ್ಬಳ್ಳಿ.
೯. ಶ್ರೀ| ವಿಷ್ಣುಪಂತ ರಾಮಚಂದ್ರ ಅಂಬಲೆ, ನಿಪ್ಪಾಣಿ.
೧೦. ಶ್ರೀ| ರುದ್ರಪ್ಪ ಸೋಮಲಿಂಗಪ್ಪ ಕೋಟಿವಾಲೆ, ನಿಪ್ಪಾಣಿ.
೧೧. ಶ್ರೀ| ಮಲ್ಲಪ್ಪ ಲಿಂಗಪ್ಪ ಕಡೇದ, ನಿಪ್ಪಾಣಿ.
೧೨. ಶ್ರೀ| ಮಲ್ಲಿಕಾರ್ಜುನ ಬಸವರಾಜ, ಹೊಸೂರಕರ.
೧೩. ಶ್ರೀ| ಮಾರುತಿರಾವ ಕದಂ, ನಿಪ್ಪಾಣಿ.
೧೪. ಶ್ರೀ| ಬಾಳು ಚವ್ಹಾಣ, ನಿಪ್ಪಾಣಿ.
೧೫. ಶ್ರೀಮತಿ ಕುಸಾಬಾಯಿ ಚವಾಣ, ನಿಪ್ಪಾಣಿ.
೧೬. ಶ್ರೀ| ನಿಂಗಪ್ಪ ಮಲ್ಲಪ್ಪ ನರೇಂದ್ರ, ಧಾರವಾಡ.
೧೭. ಶ್ರೀ| ಹನುಮಂತಪ್ಪ ದೊಡ್ಡಪ್ಪ ಸೋಮನಟ್ಟಿ, ರಾಮದುರ್ಗ.
೧೮. ಶ್ರೀಮತಿ ಶಾಂತಾಬಾಯಿ ಧಾರವಾಡಕರ, ಗೋಕಾಕ.
೧೯. ಶ್ರೀಮತಿ ಕೆಂಚವ್ವನವರು ದೊಡ್ಡಬಸನಗೌಡ್ರು, ಹಳ್ಯಾಳ.
೨೦. ಶ್ರೀಮತಿ ಗೌರಮ್ಮ ಕೋಂ. ಶಿವಯೋಗಪ್ಪಾ, ಬೆಳ್ಳುಬ್ಬಿ, ಸವದತ್ತಿ.
೨೧. ಶ್ರೀ| ವಿಶ್ವನಾಥ ಪಾಟೀಲ, ನಿಪ್ಪಾಣಿ.
೨೨. ಶ್ರೀ| ಅಣ್ಣಾಸಾಬ ಸಾಂಬ ಜಾಧವ, ನಿಪ್ಪಾಣಿ.
೨೩. ಶ್ರೀ| ದತ್ತಾತ್ರಕೃಷ್ಣಪ್ಪಾ ಜಾಧವ, ನಿಪ್ಪಾಣಿ.
೨೪. ಶ್ರೀ| ಸೋಮಲಿಂಗಪ್ಪ ಬಳ್ಳೊಳ್ಳಿ, ಅಥಣಿ.
೨೫. ಶ್ರೀ| ಚಂದ್ರಶೇಖರ ಗುಪ್ಪಣ್ಣಾ, ಕಲಾದಿಗಿ ಸವದತ್ತಿ.
೨೬. ಶ್ರೀ| ಎಸ್. ಜಿ. ಹಂಪಣ್ಣವರ, ಸವದತ್ತಿ.

೨೭. ಶ್ರೀ| ವೀರಪ್ಪಾ ಉಪ್ಪಿನ, ಬೆಳಗಾವ.
೨೮. ಶ್ರೀ| ಸಂಗಪ್ಪಾ ಉಪ್ಪಿನ, ದೇಶನೂರ.
೨೯. ಶ್ರೀ| ಶಿವನಗೌಡ ಬಾಬಾಗೌಡ ಪಾಟೀಲ, ಮತ್ತಿಕೊಪ್ಪ.
೩೦. ಶ್ರೀ| ಬಸನಗೌಡ ಪಾಟೀಲ, ಅಂಕಲಗಿ.
೩೧. ಶ್ರೀ| ಚಂದ್ರಿಗೌಡಾ ಪಾಟೀಲ, ಸೌಂಶಿ.
೩೨. ಶ್ರೀ| ಯಲ್ಲಪ್ಪಗೌಡಾ ಪಾಟೀಲ, ಸೌಂಶಿ.
೩೩. ಶ್ರೀ| ಮಲ್ಲಕಾರ್ಜುನಗೌಡ ಪಾಟೀಲ, ಹಳ್ಯಾಳ.
೩೪. ಶ್ರೀ| ಪುಂಡನಗೌಡಾ ಪಾಟೀಲ, ಹಳ್ಯಾಳ.
೩೫. ಶ್ರೀ| ವಿಷ್ಣಪ್ಪ ರಂಗಪ್ಪ ಬೆಳಮಕರ, ಟಿಂಬರ ಮುರ್ಚಂಟ, ಹುಬ್ಬಳ್ಳಿ.
೩೬. ಶ್ರೀ| ಮಲ್ಲಿಕಾರ್ಜುನಪ್ಪ ಹೆಂಪಣ್ಣವರ ಸವದತ್ತಿ.
೩೭. ಶ್ರೀ| ಭೀಮನಗೌಡ ಪಾಟೀಲ, ಯಲ್ಲಾಪುರ.
೩೮. ಶ್ರೀ| ಮಲ್ಲಪ್ಪ ಅಣ್ಣಾ, ಯಲ್ಲಾಪುರ.
೩೯. ಶ್ರೀ| ಬಾಳಿಗೌಡ ಪಾಟೀಲ, ಕರಗುಪ್ಪಿ.
೪೦. ಶ್ರೀ| ರಂಗಪ್ಪಗೌಡ ಪಾಟೀಲ, ಬಸಾಪುರ.
೪೧. ಶ್ರೀಮತಿ ಯಲ್ಲವ್ವ ಕೋಂ. ಶಂಕರಪ್ಪ, ಹಾನಗಲ್, ಗದಗ.
೪೨. ಶ್ರೀಮತಿ ಪದ್ಮಾಬಾಯಿ ಪರುಶರಾಮ ಮಹೇಂದ್ರಕರ, ಧಾರವಾಡ.
೪೩. ಶ್ರೀ| ಲಕ್ಷ್ಮಣಾ ಯಲ್ಲಪ್ಪ ಕುಡಚಿ, ಬೆಳಗಾವ.
೪೪. ಶ್ರೀ| ಕುಬೇರಪ್ಪ ಫಕೀರಪ್ಪ ಹುಯಿಲಗೋಳ, ಗದಗ.
೪೫. ಶ್ರೀಮತಿ ಕಮಲಾಬಾಯಿ ತೊಕರಬಸಪ್ಪ, ಪುಳಗುಂದ, ಗೋಕಾಕ.
೪೬. ಶ್ರೀ| ಬಸಪ್ಪ ಕೃಷ್ಣಪ್ಪ ಶಿಂದೆ, ಪುಣಾ.
೪೭. ಶ್ರೀ| ಬ. ನೆ. ಗುಡ್ಡದಗಿ ಮಾಸ್ತಾರ, ಅಥಣಿ.
೪೮. ಶ್ರೀಮತಿ ಗಂಗುಬಾಯಿ ಕೋಂ. ರಾಮಣ್ಣಾ ಮಜ್ಜಿಗುಡ್, ನವಲಗುಂದ
೪೯. ಶ್ರೀಮತಿ ಗಂಗುಬಾಯಿ ಕೋಂ. ಮುಪ್ಪಣ್ಣಾ ಗುಂಡಿ, ಹುಬ್ಬಳ್ಳಿ.
೫೦. ಶ್ರೀ| ಕುಬೇರಪ್ಪ ಹೂವಪ್ಪ ಕಲಾಲಿ, ಸೂದಾರವಾಡ, ಲೈನಬಜಾರ.
೫೧. ಶ್ರೀಮತಿ ಜಾನಕಿಬಾಯಿ ಕೋಮ ರಾಮಣ್ಣಾ ಆಕಳವಾಡಿ, ಧಾರವಾಡ.
೫೨. ಶ್ರೀ| ಪಂಪಪ್ಪಾ ದೇಸಾಯಿ, ಅಮ್ಮಿನಬಾವಿ.

----

*

೫೩. ಶ್ರೀ| ಬಸಪ್ರಬಪ್ಪ ಹೆಂಪಣ್ಣವರ ಸಾ|| ಸವದತ್ತಿ.
೫೪. ಶ್ರೀ| ಅಮೃತಪ್ಪ ಬೆಳ್ಳಿ ಸಾ|| ಅಣ್ಣಿಗೇರಿ.
೫೫. ಶ್ರೀ| ಮಲ್ಲಗೌಡ ಪಾಟೀಲ, ಕುಂಗಟೋಳಿ.
೫೬. ಶ್ರೀ| ಭೀಮಗೌಡ, ಖೋತವಳಿ.
೫೭. ಶ್ರೀ| ಬಸವಣ್ಣೆಪ್ಪ, ಸಂಗೊಳಿ ಮು. ಅಂಕಲಗಿ.
೫೮. ಶ್ರೀ| ಬಸಲಿಂಗಪ್ಪ ಬಸಪ್ಪ ಹುಲಮನಿ ಯಲ್ಲಾಪುರ.
೫೯. ಶ್ರೀ| ದೊಡ್ಡ ಮಲಗೌಡ, ಪಾಟೀಲ ಹುಲಗಬಾಳಿ.
೬೦. ಶ್ರೀ| ಬಸಗೌಡ, ಪಾಟೀಲ ಹುಲಗಬಾಳಿ.
೬೧. ಶ್ರೀ| ಶಿವಾಗೌಡ, ಪಾಟೀಲ ಹುಲಗಬಾಳಿ.
೬೨. ಶ್ರೀ| ಚೆನ್ನಗೌಡ, ಪಾಟೀಲ ಮದವಾಲ.
೬೩. ಶ್ರೀ| ಶಿವಗೌಡ, ಮ. ಪಾಟೀಲ ಗುಜನಾಳ
೬೪. ಶ್ರೀ| ಗುರಪ್ಪಗೌಡ, ಬ. ಪಾಟೀಲ ಇಸಲಾಂಪೂರ
೬೫. ಶ್ರೀ| ಮಾದೇವ ಗಡಿಗ್ಯಾ, ಲೋಕುರು.
೬೬. ಶ್ರೀ| ಶಿದ್ರಾಮಪ್ಪ, ಕ. ಬೂದಿಹಾಳ ದಾವಣಗೆರೆ.
೬೭. ಶ್ರೀಮತಿ ಚಂದ್ರಾಬಾಯಿ ತುಪ್ಪದ ಅಥಣಿ
೬೮. ,, ಅಪ್ಪಗೌಡ, ಪಾಟೀಲ, ಪಟ್ಟಣಕೋಡಿ.
೬೯. ,, ಕಲ್ಲಪ್ಪ ಹಾದೀಕಾರ, ಪಟ್ಟಣಕೋಡಿ.
೭೦. ,, ರಾಮಪ್ಪ ಹುಲ್ಲೋಳಿ, ಪಟ್ಟಣಕೋಡಿ.
೭೧. ,, ಬಸವಂತಪ್ಪ ಕ. ಬಗನಾಳಿ.
೭೨. ,, ಫಕೀರಪ್ಪ ಪಾನಶೆಟ್ಟಿ, ಅಂಕಲಗಿ.
೭೩. ಶ್ರೀಮತಿ ಸುಂದ್ರಾಬಾಯಿ, ಮುಸಳ್ಳಿಮಾರಿ.
೭೪ ಶ್ರೀ| ಅಣ್ಣಪ್ಪ ಶಿ. ತಾರಳೆ, ನಿಪ್ಪಾಣಿ.
೭೫. ,, ಬಸವಂಹೆಪ್ಪ ಗಂಗಪ್ಪ, ವಾಲಿ, ಸಾ|| ಸವದತ್ತಿ.
೭೬. ,, ಬಾಳಕೃಷ್ಣ ಕಾಶಿನಾಥ ನಾಂದಗೇಕರ ಹುಬ್ಬಳ್ಳಿ.
೭೭. ,, ಪರಸಪ್ಪ ಭೀಮಪ್ಪ ಜನಿವಾಡ, ಸಾ|| ರಡರಟ್ಟಿ.
೭೮. ,, ಅಪ್ಪಗೌಡ ಕೋತ್, ರಡರಟ್ಟಿ.
೭೯. ಶ್ರೀಮತಿ ಬಾಳವ್ವ ಜೋಗವ್ವ ಸಾ|| ಅಣ್ಣಿಗೇರಿ.
೮೦. ಶ್ರೀ| ದ್ಯಾಮನಗೌಡ ರಾಮನಗೌಡ ಪಾಟೀಲ, ಸಾ|| ಕೊಣ್ಣೂರು.

೮೧. ಶ್ರೀ ದತ್ತಾತ್ರೇಯ ಲಕ್ಷ್ಮಣ ಪಾಟೀಲ, ಸಾ|| ಕೋಳಿವಾಡ

೮೨. ಶ್ರೀಮತಿಪರಮ್ಮಾ ಬದ್ರಣ್ಣವರ, ಸಾ|| ಕೋಳಿವಾಡ

೮೩. ಶ್ರೀ ಫಕ್ಕೀರಗೌಡ್ರು ಕೆಂಬೆಂರ, ಸಾ|| ಕೋಳಿವಾಡ.

೮೪. ,, ಕಾನಪ್ಪ ಕಗ್ಗಣ್ಣವರ, ಸಾ|| ಕೊಳಿವಾಡ.

೮೫. ,, ಫಕೀರಪ್ಪ ಬದ್ರಣ್ಣವರ, ಸಾ|| ಕೊಳಿವಾಡ.

೮೬. ,, ದ್ಯಾಮಣ ಮೋಟಿ, ಸಾ|| ಕೋಳಿವಾಡ.

೮೭. ,, ಬಸಪ್ಪ ಕಿರೆಸೂರ, ಸಾ|| ಕೊಳಿವಾಡ

೮೮. ,, ಬಸನಗೌಡ ಪಾಟೀಲ, ಸಾ|| ಹೆಬ್ಬಾಳ.

೮೯. ,, ಎಚ್. ವ್ಹಿ. ಕೌಜಲಗಿ ವಕೀಲರು. ಬೈಲಹೊಂಗಲ.

೯೦. ,, ಲಕ್ಕಪ್ಪ ವೀರಭದ್ರಪ್ಪ ವಕ್ಕುಂದ, ಸಾ|| ಯಡ್ಲಗುಡ್.

೯೧. ,, ಅಪ್ಪಯ್ಯಾಗೌಡ ಪಾಟೀಲ, ಸಾ|| ದೇಗನೂರ.

---

# ಅ ನು ಕ್ರ ಮ ಣಿ ಕೆ

## ೧ನೇ ಅಧ್ಯಾಯ

೧. ಋಷಿಗಳು ಶ್ರೀ ಸ್ಕಂದಸ್ವಾಮಿಗಳಿಗೆ ಶ್ರೀ ಪರಶುರಾಮನ ಅವನ ಜನನಿ ಜನಕರಾದ ಶ್ರೀ ರೇಣುಕಾ ಜಮದಗ್ನಿಯರ ಚರಿತ್ರವನ್ನು ಕೇಳಿದ್ದಕ್ಕೆ ಶ್ರೀ ಸ್ಕಂದ(ಷಣ್ಮುಖ) ಸ್ವಾಮಿಗಳು ಆ ಚರಿತ್ರವನ್ನು ನಿರೂಪಿಸಿದ್ದು.

೨. ದೇವತೆಗಳು ವಿಷ್ಣುವಿನ ಬಳಿ ಹೋಗಿ ಮೃತ್ಯು ಲೋಕದಲ್ಲಿ ಅವತಾರ ಮಾಡಲಿಕ್ಕೂ ದಾನವರನ್ನು ಸಂಹಾರ ಮಾಡಲಿಕ್ಕೂ ಪ್ರಾರ್ಥಿಸಿ ಕೊಳ್ಳುವರು.

೩. ವಿಷ್ಣುವಿನನ್ನು ಗರ್ಭದಲ್ಲಿ ಧಾರಣ ಮಾಡಲು ಸಮರ್ಥಳಾದ ಅದಿತಿ ದೇವಿಯು ತಪಸ್ಸಿಗೆ ಹೋಗುವದು.

## ೨ನೇ ಅಧ್ಯಾಯ

೪. ಅದಿತಿ ದೇವತೆ ಕೈಲಾಸಪರ್ವತದಲ್ಲಿ ಘೋರವಾದ ತಪಸ್ಸನ್ನು ಮಾಡಿ ಏಕಾಗ್ರಮನಸ್ಸಿನಿಂದ ಶ್ರೀ ಪಾರ್ವತಿ—ಪರಮೇಶ್ವರರನ್ನು ಸ್ತುತಿಸಲಾಗಿ ಶ್ರೀ ಪಾರ್ವತಿ—ಪರಮೇಶ್ವರರು ಪ್ರಸನ್ನರಾದದ್ದು.

೫. ಅದಿತಿ ದೇವಿಯ ಅಭೀಷ್ಟದಂತೆ ಶ್ರೀ ಪರಮೇಶ್ವರನು ಅನುಗ್ರಹಿಸಿದ್ದು.

೬. ಶ್ರೀ ಪಾರ್ವತಿ ದೇವಿಯು ಅದಿತಿ ದೇವಿಗೆ ತನ್ನ ಪ್ರಭಾವವನ್ನೂ ತೇಜಸ್ಸನ್ನೂ ಅನುಗ್ರಹಿಸುವದು.

## ೩ನೇ ಅಧ್ಯಾಯ

೭. ಶ್ರೀ ಪರಮೇಶ್ವರನು ಅದಿತಿ ದೇವತೆಗೆ ವರವನ್ನು ಕೊಟ್ಟು ತಾನು ಅವಳ ಪತಿಯಾಗಲಿಕ್ಕೆ ಸಮ್ಮತಿಸಿದ್ದು ಮತ್ತು ಏಕವೀರಾನಾಮದಿಂದ ಭೂತಲದಲ್ಲಿ ಅವತರಿಸುವದು.

೮. ಕನ್ಯಾಕುಬ್ಜಾಧಿಪತಿಯಾದ ಇಕ್ಷ್ವಾಕುವಂಶದ ರೇಣುಕ ಮಹಾರಾಜನು ತನಗೆ ಉತ್ತಮಳಾದ ಸತ್ಪುತ್ರಿಯನ್ನು ಪಡೆಯುವದಕ್ಕಾಗಿ ಶ್ರೀ ಪಾರ್ವತಿ— ಪರಮೇಶ್ವರರನ್ನು ಕುರಿತು ತಪಸ್ಸುಮಾಡುವದು.

೯. ಶ್ರೀ ಪಾರ್ವತಿ—ಪರಮೇಶ್ವರರು ಶ್ರೀ ರೇಣುಕ ಮಹಾರಾಜನ ತಪಸ್ಸಿಗೆ ಮೆಚ್ಚಿ ಕನ್ಯಾ ಪ್ರಾಪ್ತಿಗಾಗಿ ಶಕ್ತಿಶಾಂತಿಯಜ್ಞವನ್ನು ಮಾಡಿ ಸತ್ಪುತ್ರಿಯನ್ನು ಪಡೆಯಲಿಕ್ಕೆ ಅಪ್ಪಣೆಯಿತ್ತದ್ದು.

## ೪ನೇ ಅಧ್ಯಾಯ

೧೦. ರೇಣುಕ ರಾಜನು ಯಜ್ಞ ಸಮಾರಂಭವನ್ನು ನಡೆಸುವದು.

೧೧. ಯಜ್ಞಕ್ಕೆ ದೇವಮುನಿಗಳೆಲ್ಲರೂ ರಾಜರೂ ಆಗಮಿಸುವದು.

೧೨. ಯಜ್ಞದಲ್ಲಿ ತೇಜಃಪುಂಜವಾದ ಸ್ವರೂಪವನ್ನು ಧರಿಸಿಕೊಂಡು ಶ್ರೀ ರೇಣುಕಾ ದೇವಿಯು ಉತ್ಪನ್ನಳಾಗಿ ಏಕವೀರಾನಾಮದಿಂದ ಸರ್ವರಿಗೂ ದರ್ಶನವಿತ್ತು ಆನಂದಪಡಿಸಿದ್ದು.

## ೫ನೇ ಅಧ್ಯಾಯ

೧೩. ಸ್ಕಂದ ಸ್ವಾಮಿಗಳನ್ನು ಋಷಿಗಳು ನಮಸ್ಕರಿಸಿ, ಶ್ರೀ ರೇಣುಕೆಯು ಅಯೋನಿಜಳಾಗಿ ಯಜ್ಞದಿಂದ ಜನಿಸಿದ ಮೇಲೆ ಶ್ರೀ ಜಮದಗ್ನಿಯ ವಿಷಯವನ್ನು ಕೇಳಿದ್ದು.

೧೪. ಸ್ಕಂದ ಸ್ವಾಮಿಗಳು ಕಶ್ಯಪಾನ್ವಯದಲ್ಲಿ ವರುಣನ ಪುತ್ರನಾಗಿ ಜನಿಸಿದ ಶ್ರೀ ಭೃಗುಮುನಿಯ ವಂಶದಲ್ಲಿ ಶ್ರೀ ಜಮದಗ್ನಿಯು ಜನಿಸಿದ ವಿಷಯವನ್ನು ನಿರೂಪಿಸಿದ್ದು.

೧೫. ಶ್ರೀ ಭೃಗುಮುನಿಯು ತನ್ನ ಪತ್ನಿಯಾದ ಪೌಲೋಮಿಯ ರಕ್ಷಣೆಗಾಗಿ ಅಗ್ನಿ ದೇವನನ್ನು ಕಾವಲಿರಿಸಿ ಗಂಗಾ ಸ್ನಾನಕ್ಕೆ ಹೋಗಲಾಗಿ, ತಾಲ ಜಂಘನೆಂಬ ದೈತ್ಯನು ಅಗ್ನಿಯನ್ನು ಮೋಸಮಾಡಿ, ಪೌಲೋಮಿ ದೇವಿಯನ್ನು ಅಪಹರಿಸಿಕೊಂಡು ಹೋದದ್ದು.

೧೬. ಶ್ರೀ ಭೃಗುಮುನಿಯು ಸ್ನಾನ ಮಾಡಿ ಪತ್ನಿಯಿಲ್ಲದ ಆಶ್ರಮವನ್ನು ನೋಡಿ, ಅಗ್ನಿಗೆ ಶಾಪವನ್ನು ಕೊಟ್ಟದ್ದು—ಅಗ್ನಿಯ ನಿರಪರಾಧವನ್ನು ತಿಳಿದು ಪುನಃ ನಿಃಶಾಪವನ್ನು ಕೊಟ್ಟದ್ದು.

೧೭. ಅಗ್ನಿಯು ಪೌಲೋಮಿಯ ಗರ್ಭದಿಂದ ಚ್ಯುತನಾಗಿ ಚ್ಯವನಭಾರ್ಗವನೆಂಬ ಹೆಸರಿನಿಂದ ಹುಟ್ಟಿದ್ದು. ಅವನ ಉದರದಿಂದ ಸಾಕ್ಷಾತ್ ಶ್ರೀ ಭೃಗುಮುನಿಗಳೇ ಶ್ರೀ ಬ್ರಹ್ಮನ ವರದಿಂದ ಋಚೀಕನೆಂಬ ಹೆಸರಿನೆಂಬ ಜನಿಸಿದ್ದು.

## ೬ನೇ ಅಧ್ಯಾಯ

೧೮. ಇಕ್ಷ್ವಾಕು ರಾಜನ ತಪಸ್ಸಿಗೆ ಮೆಚ್ಚಿದ್ದರಿಂದ ಅವನಿಗೆ ಭೀಮನೆಂಬ ಮಗನು ಹುಟ್ಟಿದನು. ಭೀಮನಿಗೆ ಕಾಂಚನನೆಂಬ ಮಗನು, ಕಾಂಚನ

ನಿಂದ ಸುಹೋತ್ರನೆಂಬವನು, ಸುಹೋತ್ರನಿಗೆ ಕೌಶಿಸಿಯೆಂಬ ಪತ್ನಿಯಲ್ಲಿ ಜಹ್ನುನೆಂಬ ಮಗನು ಹುಟ್ಟಿದನು. ಜಹ್ನುವು ಯಜ್ಞವನ್ನು ಮಾಡುತ್ತಿರಲಾಗಿ, ಗಂಗೆಯು ಯಜ್ಞ ಮಂಟಪವನ್ನು ಪ್ರವೇಶಿಸಿ ಯಜ್ಞ ಭಂಗ ಮಾಡಿದ್ದರಿಂದ ಜಹ್ನು ಗಂಗೆಯನ್ನು ಕುಡಿದನ್ನು. ಋಷಿಗಳ ಪ್ರಾರ್ಥನೆಯಿಂದ ಪುನಃ ಜಹ್ನು ಗಂಗೆಯನ್ನು ಕರ್ಣದಿಂದ ಹೊರಗೆ ಬಿಟ್ಟಿದ್ದು.

೧೮. ಜಹ್ನುವಿನ ಪತ್ನಿಯಾದ ಕಾವೇರಿದೇವಿಯ ಗರ್ಭದಿಂದ ಸುಹೋತ್ರನೆಂಬ ಧಾರ್ಮಿಕ ಪುತ್ರನು, ಸುಹೋತ್ರನಿಗೆ ಅಜಕನೆಂಬ ಪುತ್ರನೂ ಬಲಕಾಶ್ವನೆಂಬ ಮಗನೂ, ಬಲಕಾಶ್ವನಿಗೆ ಕುಶನೆಂಬ ಪುತ್ರನು, ಕುಶನಿಗೆ ಕುಶಾಂಭ, ಕುಶನಾಭ, ಶೃಂಗಾಮುರ, ಸುವಸು ಎಂಬ ನಾಲ್ಕು ಜನ ಪುತ್ರರು ಜನಿಸಿದ್ದು.

೨೦. ಕುಶಾಂಭನು ಇಂದ್ರನನ್ನು ಕುರಿತು ತಪಸ್ಸುಮಾಡಲಾಗಿ ಇಂದ್ರನು ಅವನ ಪುತ್ರನಾಗಿ ಜನಿಸಿದ್ದು. ಅವನಿಗೆ ಗಾಧಿಯೆಂದು ಹೆಸರಿಟ್ಟಿದ್ದು. ಆ ಮಹಾತ್ಮನಾದ ಗಾಧಿಯೆಂಬ ಅರಸನ ಪತ್ನಿಯಾದ ಪೌರುಕುತ್ಸಾ ಎಂಬ ರಾಣಿಯ ಗರ್ಭದಿಂದ ಸತ್ಯವತೀ ಎಂಬ ಸತ್ಪುತ್ರಿಯು ಜನಿಸಿದ್ದು.

೨೧. ಗಾಧಿಮಹಾರಾಜನು ತನ್ನ ಪುತ್ರಿಯಾದ ಸತ್ಯವತಿಯನ್ನು ಚ್ಯವನ ಭಾರ್ಗವಋಷಿಯ ಪುತ್ರನಾದ ಋಚೀಕನಿಗೆ ಧಾರೆಯೆರೆದು ಕೊಟ್ಟಿದ್ದು.

೨೨. ಸತ್ಯವತಿಯು ತನಗೂ ತನ್ನ ತಾಯಿಗೂ ಪುತ್ರಸಂತಾನವಿಲ್ಲದ್ದರಿಂದ ಪುತ್ರಸಂತಾನದ ಅನುಗ್ರಹ ಪಡೆಯುವುದಕ್ಕಾಗಿ ತನ್ನ ಪತಿಯಾದ ಋಚೀಕನನ್ನು ಅನನ್ಯಭಕ್ತಿಯಿಂದ ಸೇವೆಮಾಡಲಾಗಿ, ಋಚೀಕನು ಅವರಿಗೆ ಪುತ್ರಸಂತಾನಪ್ರಾಪ್ತಿಗಾಗಿ ಮಂತ್ರಾನ್ನವನ್ನು ಕೊಟ್ಟು ತಾನು ಗೋದಾವರಿಯ ತಟಕ್ಕೆ ತಪಸ್ಸಿಗೆ ಹೋದದ್ದು.

## ೭ನೇ ಅಧ್ಯಾಯ

೨೩. ಸತ್ಯವತಿಯು ಪತಿಯು ಅನುಗ್ರಹಿಸಿದ ಮಂತ್ರಾನ್ನವನ್ನು ತನ್ನ ತಾಯಿಯೂ ತಾನೂ ಸೇವಿಸಿದರು. ಪರಂತು ಆ ಮಂತ್ರಾನ್ನವನ್ನು ಅದಲುಬದಲಾಗಿ ಒಬ್ಬರ ಒಬ್ಬರ ಮಂತ್ರಾನ್ನವನ್ನು ಮತ್ತೊಬ್ಬರು

ಸೇವಿಸಿದರು. ಆದರಿಂದ ಸತ್ಯವತಿಯ ಗರ್ಭದಲ್ಲಿ ಕ್ಷತ್ರಿಯಪಿಂಡವೂ ಅವಳ ತಾಯಿಯ ಗರ್ಭದಲ್ಲಿ ಬ್ರಾಹ್ಮಣಪಿಂಡವೂ ಮೂಡಿತು.

೨೪. ಋಚೀಕನು ಬಂದು ಈ ವಿಪರೀತ ಮಂತ್ರಸೇವನೆಯಿಂದ ಆದ ವಿಪರೀತ ಪಿಂಡೋತ್ಪತ್ತಿಯನ್ನು ತಿಳಿದು, ಸತ್ಯವತಿಯ ಪ್ರಾರ್ಥನೆಯಂತೆ ತನ್ನ ಮಂತ್ರಸಿದ್ಧಿಯ ಪ್ರಭಾವದಿಂದ ಸತ್ಯವತಿಗೆ ಬ್ರಹ್ಮತೇಜಸ್ಸಿನಿಂದ ಕೂಡಿದ ಪುತ್ರನು, ಅವಳ ತಾಯಿಗೆ ಕ್ಷಾತ್ರತೇಜಸ್ಸಿನಿಂದ ಕೂಡಿದ ಪುತ್ರನು ಉದಯಿಸುವಂತೆ ಅನುಗ್ರಹಿಸಿದನು. ಸತ್ಯವತಿಯ ಪುಣ್ಯ ಪ್ರಭಾವದಿಂದ ಜಮದಗ್ನಿಯೆಂಬ ಪುತ್ರನು ಜನಿಸಿದನು. ಸತ್ಯವತಿಯು ಕೌಶಿಕಿ ಎಂಬ ಹೆಸರಿನ ನದಿಯಾಗಿ ಹರಿದದ್ದು.

## ೮ನೇ ಅಧ್ಯಾಯ

೨೫. ಸ್ಕಂದಸ್ವಾಮಿಗಳಿಗೆ ಜಮದಗ್ನಿಯನ್ನು ಸ್ವಯಂವರದಲ್ಲಿ ಶ್ರೀ ರೇಣುಕಾ ದೇವಿಯು ಲಗ್ನವಾದ ವಿಷಯವನ್ನು ಹೇಳಲು ಪ್ರಾರ್ಥಿಸಿಕೊಂಡದ್ದು.

೨೬. ಗೌತಮಿಯ ಕೋಟಿತೀರ್ಥದಲ್ಲಿ ಋಚೀಕನು ತನ್ನ ಮಗನನ್ನು ಕೂಡಿಕೊಂಡು ಘೋರವಾದ ತಪಸ್ಸುಮಾಡಿ, ಗೌತಮಿಯನ್ನು ಪ್ರತ್ಯಕ್ಷ ಮಾಡಿಕೊಂಡು ವಾಂಛಿತಾರ್ಥವನ್ನು ಪಡೆದದ್ದು.

## ೯ನೇ ಅಧ್ಯಾಯ

೨೭. ಋಚೀಕನು ಮತ್ತು ಜಮದಗ್ನಿಯು ಗಂಗಾಸ್ನಾನಾರ್ಥಿಗಳ ದೆಶೆಯಿಂದ ಭಾಗೀರಥೀ ತಟಕ್ಕೆ ಬರಲು, ಅವರಿಬ್ಬರಿಗೆ ರೇಣುಕರಾಜನ ದರ್ಶನವಾಯಿತು. ಆಗ ರೇಣುಕರಾಜನು (ಅವರ ರೂಪಲಾವಣ್ಯ) ತನ್ನ ಮಗಳಾದ ರೇಣುಕಾದೇವಿಯನ್ನು ಯೋಗ್ಯ ವರನಿಗೆ ಕೊಡಬೇಕೆಂದು ತನ್ನ ಸಂಕಲ್ಪವನ್ನು ಅವರಿಗೆ ತಿಳಿಸಿದ್ದು.

೨೮. ಋಚೀಕಮಹರ್ಷಿಯು ರೇಣುಕೆಯ ಸ್ವಯಂವರಮಾಡಿ, ಆ ಸ್ವಯಂವರದಲ್ಲಿ ಯೋಗ್ಯ ವರನನ್ನು ಆರಿಸುವದು ಉತ್ತಮವೆಂದು ರೇಣುಕ ರಾಜನಿಗೆ ಅರುಹಿದ್ದು.

## ೧೦ನೇ ಅಧ್ಯಾಯ

೨೯. ರೇಣುಕಮಹಾರಾಜನು ಮಗಳ ಸ್ವಯಂವರ ಮಂಟಪವನ್ನು ರಚಿಸಿದ್ದು.

೩೦. ರೇಣುಕೆ ಸ್ವಯಂವರಮಂಟಪವನ್ನು ಪ್ರವೇಶಿಸಿ ಜಮದಗ್ನಿಋಷಿಯ ಕಂಠಕ್ಕೆ ಸ್ವಯಂವರಮಾಲೆಯನ್ನು ಹಾಕಿದ್ದು.

## ೧೧ನೇ ಅಧ್ಯಾಯ

೩೧. ಸ್ವಯಂವರಕ್ಕೆ ಬಂದಿದ್ದ ಉಳಿದ ರಾಜಕುಮಾರರು ಮತ್ಸರದಿಂದ ಕುಪಿತರಾಗಿ ರೇಣುಕರಾಜನನ್ನು ಯುದ್ಧದಿಂದ ಜಯಿಸಿ, ರೇಣುಕೆಯನ್ನು ಅಪಹರಿಸಬೇಕೆಂದು ಯುದ್ಧ ನಡೆಸಿದ್ದು.

೩೨ ಯುದ್ಧದಲ್ಲಿ ರೇಣುಕರಾಜನ ಸಹಾಯಕ್ಕಾಗಿ ಜಮದಗ್ನಿಮಹರ್ಷಿಯು ಯುದ್ಧ ಮಾಡಲಿಕ್ಕೆ ಸನ್ನದ್ಧವಾದದ್ದು.

೩೩. ಯುದ್ಧದಲ್ಲಿ ಸರ್ವ ಶತ್ರುಗಳು ಪರಾಜಿತರಾಗಿ ಸೋತುಹೋದದ್ದು.

## ೧೨ನೇ ಅಧ್ಯಾಯ

೩೪. ರೇಣುಕರಾಜನು ಅತ್ಯಂತ ವೈಭವದಿಂದ ರೇಣುಕೆಯನ್ನು ಜಮದಗ್ನಿಗೆ ಶುಭಮೂಹೂರ್ತದಲ್ಲಿ ಧಾರೆಯೆರೆದು ಕೊಟ್ಟದ್ದು.

೩೫- ಋಚೀಕ ಮತ್ತು ಜಮದಗ್ನಿ ಮಹರ್ಷಿಗಳು ಮರಳಿ ತಮ್ಮ ಆಶ್ರಮಕ್ಕೆ ಬಂದದ್ದು.

## ೧೩ನೇ ಅಧ್ಯಾಯ

೩೬. ರೇಣುಕರಾಜನು ಜಮದಗ್ನಿಯನ್ನು ರಾಜಧಾನಿಗೆ • ಕರೆದುಕೊಂಡು ಹೋಗಿ ಅವನಿಗೆ ಕನ್ಯಾಕುಬ್ಜ ರಾಜ್ಯವನ್ನು ಕೊಟ್ಟು ತನ್ನ ಮೊದಲಿನ ರಾಜಧಾನಿಗೆ ಹೋದದ್ದು.

೩೭. ದೇವೇಂದ್ರನು ಜಮದಗ್ನಿ ಆಶ್ರಮಕ್ಕೆ ಬಂದು ಅತಿಥಿಸತ್ಕಾರದಿಂದ ಆನಂದಿತನಾಗಿ ಕಾಮಧೇನುವನ್ನು ಕಲ್ಪತರುವನ್ನು ಚಿಂತಾಮಣಿಯನ್ನು ಸ್ಪರ್ಶಮಣಿಯನ್ನು ಕೊಟ್ಟು ಹೋದದ್ದು.

೩೮. ಶ್ರೀ ರೇಣುಕಾದೇವಿಯು ಜಮದಗ್ನಿ ಮಹರ್ಷಿಗಳು ಕಾಮಧೇನು ಕಲ್ಪವೃಕ್ಷಗಳ ಸಹಾಯದಿಂದ ಸರ್ವ ಅತೀಥಿ ಅಭ್ಯಾಗತರ ಸೇವೆಯನ್ನು ಮಾಡುತ್ತಿರಲು ಶ್ರೀ ರೇಣುಕಾದೇವಿಯ ಗರ್ಭದಿಂದ ಅಗ್ನಿ, ವಾಯು, ಸೂರ್ಯ, ಇಂದ್ರರು, ಇವರು ವಸು, ವಿಶ್ವಾವಸು, ಬೃಹದ್ಭಾನು ಬೃಹತ್ಕಣ್ವರೆಂಬ ಪುತ್ರರಾಗಿ ಜನಿಸಿದ್ದು.

೩೯. ವಿಷ್ಣುವು ಶ್ರೀ ರೇಣುಕಾದೇವಿಯ ಗರ್ಭದಲ್ಲಿ ಜನಿಸುವ ಇಚ್ಛೆಯನ್ನು ನಾರದನ ಮುಖಾಂತರ ಹೇಳಿ ಕಳಿಸಿದ್ದು.

೪೦ ನಾರದನ ಮುಖದಿಂದ ಶ್ರೀ ರೇಣುಕಾದೇವಿಯು ಕೇಳಿ ಅದಕ್ಕೆ ಸಮ್ಮತಿಸಿದ್ದು.

೪೧ ಹರಿಯು ಶ್ರೀ ರೇಣುಕಾದೇವಿಯ ಗರ್ಭದಿಂದ ಜನಿಸಿದ್ದು ಪರಶುರಾಮನ ಜನನದಿಂದ ಕಾರ್ತವೀರಾರ್ಜುನನಿಗೆ ಅಪಶಕುನವಾದದ್ದು.

## ೧೪ನೇ ಅಧ್ಯಾಯ

೪೨. ಪರಶುರಾಮನ ಬಾಲಲೀಲಾ ವರ್ಣನೆಯು.

೪೩. ಪರಶುರಾಮನು ಶ್ರೀ ಪರಮೇಶ್ವರನನ್ನು ಮೆಚ್ಚಿಸಿಕೊಳ್ಳಲು ತಪಸ್ಸಾ ಚರಣೆಗೆ ಜನನಿಜನಕರ ಆಜ್ಞೆ ಕೇಳಿದ್ದು.

## ೧೫ನೇ ಅಧ್ಯಾಯ

೪೪. ಕೈಲಾಸಪರ್ವತದಲ್ಲಿ ಪರಶುರಾಮನು ತಪಸ್ಸಾಚರಿಸುವದು. ಪರಶು ರಾಮನ ತಪಸ್ಸಿಗೆ ಪರಶಿವನು ಮೆಚ್ಚಿ ರಾಮನಿಗೆ ಧನುರ್ವಿದ್ಯೆಯನ್ನು ಉಪದೇಶ ಮಾಡಿದ್ದು.

## ೧೬ನೇ ಅಧ್ಯಾಯ

೪೫. ಪರಶುರಾಮನು ಕೈಲಾಸಕ್ಕೆ ಧನುರ್ವಿದ್ಯಾಭ್ಯಾಸಕ್ಕೆ ಹೋಗಲು ಇತ್ತ ರೇಣುಕೆ ತನ್ನ ನಾಲ್ಕು ಪುತ್ರರೊಡನೆ ಕಾಲಕ್ಷೇಪ ಮಾಡುತ್ತ ತನ್ನ ಮನಸ್ಸಿನಿಂದ ಓರ್ವ ಕುಮಾರಿಯನ್ನು ಸ್ಮರಿಸಿ ತ್ರಿಕುಲಾ ಎಂಬ ಕುಮಾರಿ ಯನ್ನು ಪಡೆದದ್ದು.

೪೬. ಪರಶುರಾಮನು ಪರಶಿವನಿಂದ ಧನುರ್ವಿದ್ಯೆಯನ್ನು ಕಲಿತು ತನ್ನ ಆಶ್ರ ಮಕ್ಕೆ ಬಂದು ಜನನಿಜನಕರಿಗೆ ತನ್ನ ತಪಸ್ಸು ಸಫಲವಾದದ್ದನ್ನು ತಿಳುಹಿಸಿ ಆನಂದಪಡಿಸಿದ್ದು.

## ೧೭ನೇ ಅಧ್ಯಾಯ

೪೭. ಪರಶುರಾಮನು ಪರಶುವಿದ್ಯೆಯನ್ನು ಸಮರ್ಥ ಮಾಡುವದಕ್ಕಾಗಿ ಜನನಿಜನಕರ ಅಪ್ಪಣೆಯಂತೆ ಕೈಲಾಸಕ್ಕೆ ಹೋಗಿ ಶ್ರೀ ವಿಶ್ವೇಶ್ವರ ನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿದ್ದು.

೨೮. ಪರಶುರಾಮನ ತಪಸ್ಸಿಗೆ ಶ್ರೀ ಗಣಾಧಿನಾಥ ಮೆಚ್ಚಿ ಅವನಿಗೆ ಪರಶುವನ್ನು ಅನುಗ್ರಹಿಸಿ ಪರಶುವಿದ್ಯೆಯ ಮರ್ಮವನ್ನು ತಿಳಿಸಿದ್ದು.

## ೧೮ನೇ ಅಧ್ಯಾಯ

೨೯. ವಿಘ್ನೇಶ್ವರನಿಂದ ವರವನ್ನು ಹೊಂದಿ ಪರಶುವಿದ್ಯೆಯನ್ನು ಕಲಿತು. ಕೈಲಾಸಕ್ಕೆ ಬಂದು, ಶ್ರೀ ಮಹಾದೇವರ ದರ್ಶನ ಪಡೆದದ್ದು.

೩೦. ಶ್ರೀ ಮಹಾದೇವರು ಶ್ರೀ ರೇಣುಕೆಯ ಪೂರ್ವ ಕಥೆಯನ್ನು ತಾನು ಜಮದಗ್ನಿಯಾದ ವಿವರವನ್ನು ಪರಶುರಾಮನಿಗೆ ತಿಳಿಸಿದ್ದು.

## ೧೯ನೇ ಅಧ್ಯಾಯ

೩೧. ನಾರದನು ಕೈಲಾಸಕ್ಕೆ ಹೋಗಿ ಶ್ರೀ ಮಹಾದೇವರ ಸ್ತೋತ್ರಮಾಡಿ ಕೈಮುಗಿದುಕೊಂಡು ನಿಂತಿರಲು ಅವನಿಗೆ ಮಹಾದೇವರು ಶ್ರೀ ರೇಣುಕೆಯ ವೃತ್ತಾಂತವನ್ನು ಕೇಳಿ ಅದರ ಪೂರ್ವ ಕಥೆಯನ್ನು ನಾರದನಿಗೆ ತಿಳಿಸಿದ್ದು.

## ೨೦ನೇ ಅಧ್ಯಾಯ

೩೨. ಗಂಧರ್ವ ದಂಪತಿಗಳು ಜಮದಗ್ನಿ ಮಹರ್ಷಿಯ ಆಶ್ರಮಕ್ಕೆ ಬಂದದ್ದು.

೩೩. ಆಶ್ರಮದ ಸಮೀಪದಲ್ಲಿ ಭಾಗೀರಥಿಯಲ್ಲಿ ಜಲಕ್ರೀಡೆಯಾಡಿದ್ದು.

೩೪. ಆ ಕಾಲಕ್ಕೆ ಶ್ರೀ ಪಾರ್ವತಿ ಪರಮೇಶ್ವರರು ಪರಶುರಾಮನು ಅಲ್ಲಿಗೆ ಬಂದದ್ದು.

## ೨೧ನೇ ಅಧ್ಯಾಯ

೩೫. ಭಾಗೀರಥಿಯಲ್ಲಿ ಗಂಧರ್ವ ದಂಪತಿಗಳು ಜಲಕ್ರೀಡೆಯನ್ನು ಆಡುತ್ತಿರಲು ಅಗ್ರೋಧಕವನ್ನು ತೆಗೆದುಕೊಂಡು ಬರಲಿಕ್ಕೆ ಹೋಗಿದ್ದ ರೇಣುಕೆಯು ಅವರ ಜಲಕ್ರೀಡೆಯನ್ನು ನೋಡಿ ಮನಸ್ಸು ಚಂಚಲವಾದದ್ದು.

೩೬. ರೇಣುಕೆಯ ಚಿತ್ತಚಂಚಲತೆಯನ್ನು ನೋಡಿ ಜಮದಗ್ನಿಯು ಕೋಪಿಸನಾಗಲು ರೇಣುಕೆಯು ಕ್ಷಮಾಯಾಚನೆ ಮಾಡಿದ್ದು.

## ೨೨ನೇ ಅಧ್ಯಾಯ

೩೭. ರೇಣುಕೆಯ ಚಿತ್ತ ಚಂಚಲಿತೆಯಿಂದ ಕೋಪಿಷ್ಟನಾದ ಜಮದಗ್ನಿಯು ಅವಳನ್ನು ಕೊಲ್ಲಲಿಕ್ಕೆ ತನ್ನ ಪುತ್ರರಾದ ವಸು ಮತ್ತು ವಿಶ್ವಾವಸು ಇವರಿರ್ವರಿಗೆ ಆಜ್ಞಾಪಿಸಿದ್ದು.

೫೮. ತಂದೆಯ ಮಾತಿಗೆ ಅವರಿಬ್ಬರು ಒಪ್ಪಿಕೊಳ್ಳದಿರಲು ಅವರನ್ನು ಶಾಪ ದಿಂದ ಕೊಂದು ಹಾಕಿದ್ದು.

## ೨೩ನೇ ಅಧ್ಯಾಯ

೫೯. ಜಮದಗ್ನಿ ಬ್ರಹತ್‌ಕಣ್ವ ಮತ್ತು ಬ್ರಹದ್ಭಾನುವನ್ನು ಕರೆದು ಕೊಲ್ಲ ಲಿಕ್ಕೆ ಅಪ್ಪಣೆ ಕೊಟ್ಟದ್ದು.

೬೦. ಅವರಿಬ್ಬರು ಜನನಿಯನ್ನು ಕೊಲ್ಲಲು ನಿರಾಕರಿಸಿದ್ದು.

## ೨೪ನೇ ಅಧ್ಯಾಯ

೬೧. ಜಮದಗ್ನಿ ಅವರೀರ್ವರನ್ನು ಶಾಪಕೊಟ್ಟು ಕೊಂದುಬಿಟ್ಟದ್ದು.

೬೨. ಜಮದಗ್ನಿಯು ಪರಶುರಾಮನನ್ನು ಸ್ಮರಿಸಲಾಗಿ ಪರಶುರಾಮನು ಕೈಲಾಸದಿಂದ ಬಂದು ತಂದೆಯ ಆಜ್ಞೆಯ ವಿವರವನ್ನು ಕೇಳಿದ್ದು.

## ೨೫ನೇ ಅಧ್ಯಾಯ

೬೩. ಜಮದಗ್ನಿಯು ರೇಣುಕೆಯನ್ನು ಕೊಲ್ಲಲಿಕ್ಕೆ ಪರಶುರಾಮನಿಗೆ ಅಪ್ಪಣೆ ಮಾಡಿದ್ದು.

೬೪. ಪರಶುರಾಮನು ಜನಕನಾಜ್ಞೆಯಂತೆ ಜನನಿಯ ಶಿರಚ್ಛೇದನ ಮಾಡಿದ್ದು.

೬೫. ಜಮದಗ್ನಿಯು ಪರಶುರಾಮನ ಪಿತೃವಚನ ಪರಿಪಾಲನವನ್ನು ನೋಡಿ ಇಷ್ಟಾರ್ಥವನ್ನು ಬೇಡಲಿಕ್ಕೆ ಕೇಳಿದ್ದು.

೬೬. ಪರಶುರಾಮನು ತನ್ನ ನಾಲ್ಕು ಅಣ್ಣಂದಿರನ್ನೂ ತಾಯಿಯನ್ನೂ ಪುನಃ ಬದುಕಿಸಲಿಕ್ಕೂ—ಕ್ರೋಧವನ್ನು ತ್ಯಜಿಸಲಿಕ್ಕೂ ಪ್ರಾರ್ಥಿಸಿದ್ದು.

## ೨೬ನೇ ಅಧ್ಯಾಯ

೬೭. ಜಮದಗ್ನಿಯು ವಸು ಮೊದಲಾದ ನಾಲ್ಕು ಪುತ್ರರನ್ನೂ ರೇಣುಕೆ ಯನ್ನು ಸಜೀವ ಮಾಡಿದ್ದು

೬೮. ಕ್ರೋಧವನ್ನು ತ್ಯಜಿಸಲಿಕ್ಕೆ ಕ್ರೋಧಕ್ಕೆ ಹೇಳಲು ಕ್ರೋಧ ಮತ್ತು ಜಮದಗ್ನಿಯರ ನಡುವೆ ಪ್ರಶ್ನೋತ್ತರಗಳು ನಡೆದದ್ದು.

## ೨೭ನೇ ಅಧ್ಯಾಯ

೬೯. ಜಮದಗ್ನಿ ಕ್ರೋಧಗಳ ನಡುವೆ ಪ್ರಶ್ನೋತ್ತರಗಳು ಪುನಃ ನಡೆದು ಕ್ರೋಧವು ಅಂತರ್ಧಾನವಾದದ್ದು.

೨೦. ನಾರದನು ಮಹಿಷ್ಮತಿ ನಗರಕ್ಕೆ ಬಂದು ಕಾರ್ತವೀರ್ಯನ ಮುಂದೆ ಜಮದಗ್ನಿ ಆಶ್ರಮದ ವರ್ಣನೆ ಮಾಡಿದ್ದು.

೨೧. ಹೈಹಯರಾಜನ ಮಗನಾದ ಕೃತವೀರ್ಯನ ಮತ್ತು ಅವರ ಸತಿಯಾದ ರಾಕಾವತಿಯ ಗರ್ಭದಿಂದ ಕಾರ್ತವೀರ್ಯನು ಕರಹೀನನಾಗಿ ಜನಿಸಿದ್ದು.

೨೨. ಕಾರ್ತವೀರ್ಯನು ಕರಹೀನನಾಗಿ ಜನಿಸಿದ ಕಾರಣ ಕಾರ್ತವೀರ್ಯನು ಕೈಲಾಸದಲ್ಲಿ ಘೋರ ತಪವನ್ನಾಚರಿಸಿ ದತ್ತಾತ್ರೇಯ (ಮಹಾದೇವ) ರಿಂದ ಸಹಸ್ರ ಭುಜಗಳನ್ನು ಪಡೆದದ್ದು.

೨೩. ಕಾರ್ತವೀರ್ಯನು ನರ್ಮದೆಯಲ್ಲಿ ತನ್ನ ಸ್ತ್ರೀಯರನ್ನು ಕೂಡಿಕೊಂಡು ಜಲಕ್ರೀಡೆಯಾಡುತ್ತಿದ್ದ ವೇಳೆಯಲ್ಲಿ ರಾವಣನು ಕಾರ್ತವೀರ್ಯನನ್ನು ಜಯಿಸುವದಕ್ಕಾಗಿ ಬಂದು ನರ್ಮದಾ ನದಿಯಲ್ಲಿ ಲಿಂಗ ಸ್ಥಾಪನೆಮಾಡಿ ಪೂಜೆ ಮಾಡುತ್ತಿರಲು ನದೀ ನೀರು ಮೇಲಕ್ಕೇರಿ ಪೂಜಾ ಸಾಮಗ್ರಿಗಳು ನೀರಿನಲ್ಲಿ ಮುಳುಗಿದ್ದು.

೨೪. ಹೀಗಾಗಲಿಕ್ಕೆ ಕಾರಣವನ್ನು ಶೋಧಿಸಲು ಭಟರನ್ನು ಕಳಿಸಿದ್ದು.

೨೫. ಭಟರು ಕಾರ್ತವೀರ್ಯನು ಜಲಕ್ರೀಡೆಯಾಡುವದನ್ನು ನೋಡಿ ರಾವಣನ ವಿಷಯವನ್ನು ಅರುಹಿದ್ದು.

೨೬. ಕಾರ್ತವೀರ್ಯನು ರಾವಣನ ಹತ್ತಿರ ಬಂದು ಯುದ್ಧಕ್ಕೆ ಕರೆದದ್ದು.

೨೭. ಕಾರ್ತವೀರ್ಯನಿಗೂ ರಾವಣನಿಗೂ ಯುದ್ಧವಾಗಿ ಸೋತದ್ದು.

೨೮. ರಾವಣನನ್ನು ಬಂದಿಯಾಗಿ ಹಿಡಿದು ತಂದು ಅವನನ್ನು ಬತ್ತಲೆಮಾಡಿ ತನ್ನ ಮನೆಯ ಕಂಬಕ್ಕೆ ಕಟ್ಟಿದ್ದು.

೨೯. ವಸುಶ್ರವನೂ, ಬ್ರಹ್ಮನೂ, ಪೌಲಸ್ತ್ಯನೂ, ಮುನಿಗಳೂ ರಾವಣನನ್ನು ಶೋಧಿಸಲಿಕ್ಕೆ ಮಹಿಷ್ಮತಿ ನಗರಕ್ಕೆ ಬಂದದ್ದು ಮತ್ತು ರಾವಣನನ್ನು ಬಿಡಲಿಕ್ಕೆ ಕೇಳಿದ್ದು.

೩೦. ಕಾರ್ತವೀರ್ಯನು ರಾವಣನನ್ನು ಬಿಟ್ಟು ಅವನಿಗೆ ಒಪ್ಪಿಸಿದ್ದು.

## ೨೧ನೇ ಅಧ್ಯಾಯ

೩೧. ಬ್ರಹ್ಮನೂ—ಪೌಲಸ್ತ್ಯನೂ ಕಾರ್ತವೀರ್ಯನನ್ನು ಅನೇಕ ಪ್ರಕಾರ ವರ್ಣಿಸಿದ್ದು.

೮೨. ನಾರದನು ಕಾರ್ತವೀರ್ಯನ ಸಭೆಗೆ ಬಂದು ಜಮದಗ್ನಿಯ ಪ್ರಭಾವವನ್ನೂ ಅವನ ಆಶ್ರಮದ ವರ್ಣನೆಯನ್ನೂ ಮಾಡಿದ್ದು.

೮೩. ಕಾರ್ತವೀರ್ಯನು ಜಮದಗ್ನಿಯ ಆಶ್ರಮಕ್ಕೆ ಬಂದದ್ದು.

## ೨೯ನೇ ಅಧ್ಯಾಯ

೮೪. ಕಾರ್ತವೀರ್ಯನು ತನ್ನ ಆಶ್ರಮಕ್ಕೆ ಬಂದದ್ದನ್ನು ತಿಳಿದು ಜಮದಗ್ನಿ ಋಷಿಯು ರೇಣುಕಾದೇವಿಗೆ ಹೇಳಿ ಅವನ ಸೇನಾಸಮೇತ ಕಾರ್ತವೀರ್ಯನ ಆದರೋಪಚಾರ ಮಾಡಲಿಕ್ಕೆ ಆಲೋಚಿಸಿದ್ದು.

## ೩೦ನೇ ಅಧ್ಯಾಯ

೮೫. ರೇಣುಕಾದೇವಿಯೊಡನೆ ವಿಚಾರ ಮಾಡಿ ಜಮದಗ್ನಿ ಋಷಿಯು ಕಾರ್ತವೀರ್ಯನ ಹತ್ತಿರಕ್ಕೆ ಹೋಗಿ ಆಶ್ರಮಕ್ಕೆ ಬರಲು ಆಮಂತ್ರಣ ಕೊಟ್ಟದ್ದು.

೮೬. ಆಮಂತ್ರಣದ ಪ್ರಕಾರ ಕಾರ್ತವೀರ್ಯನು ಜಮದಗ್ನಿ ಋಷಿಯ ಆಶ್ರಮಕ್ಕೆ ಬಂದು ಅವರ ಆತಿಥ್ಯವನ್ನು ಹೊಂದಿದ್ದು.

೮೭. ಆದರ ಆತಿಥ್ಯವನ್ನು ಹೊಂದಿ ಕಾಮಧೇನುವಿನಿಂದಲೇ ಈ ಪ್ರಕಾರ ಸರ್ವಸಾಹಿತ್ಯವು ಸಿದ್ಧವಾಗುವದೆಂದು ಜಮದಗ್ನಿಬಾಯಿಂದ ಕೇಳಿದ್ದು.

## ೩೧ನೇ ಅಧ್ಯಾಯ

೮೮. ಜಮದಗ್ನಿಯು ಕಾರ್ತವೀರ್ಯನ ಸತ್ಕಾರ ಮಾಡಿ ವಸ್ತ್ರಾಭರಣಗಳನ್ನು ಕೊಡ ಹೋಗಲು, ಅವನು ಅವುಗಳನ್ನು ತಿರಸ್ಕರಿಸಿ ಕಾಮಧೇನುವನ್ನು ಕೊಡಲಿಕ್ಕೆ ಕೇಳಿದ್ದು.

೮೯. ಸರ್ವ ರಾಜ್ಯವನ್ನು ಕೊಡುತ್ತೇನೆ. ಈ ಕಾಮಧೇನುವನ್ನು ಕೊಡು ಎಂದು ಜಮದಗ್ನಿಯನ್ನು ಕೇಳಿದ್ದು.

೯೦. ದುರ್ವಾಸ ಮತ್ತು ಋಚಿಕ ಮುನಿಗಳು ಕಾರ್ತವೀರ್ಯನಿಗೆ ಉಪದೇಶ ಮಾಡಿದ್ದು.

೯೧. ದುರ್ವಾಸ-ಅಗಸ್ತ್ಯ—ವಸಿಷ್ಠ—ಗೌತಮ ಮಹರ್ಷಿಗಳು-ಕಾಮಧೇನುವನ್ನು ಕೇಳಬಾರದೆಂದೂ ಕಾರ್ತವೀರ್ಯನಿಗೆ ಉಪದೇಶ ಮಾಡಿದ್ದು.

೯೨. ಕಾಮಧೇನು-ಅಗ್ನಿಗಳು ಆಪ್ತಾಲೋಚನೆ ನಡೆಸಿದ್ದು.

೯೩. ಕಾಮಧೇನು ಸಿಟ್ಟಿನಿಂದ ಹುಂಕರಿಸಿ ಅನೇಕ ಯುದ್ಧಭಟರ ಉತ್ಪನ್ನವಾದದ್ದು. ಕಾರ್ತವೀರ್ಯನ ಸೇನೆಯೊಡನೆ ಯುದ್ಧ ಮಾಡಿ ಕಾಮಧೇನು ಸಿಟ್ಟಿನಿಂದ ತನ್ನ ಕೋಡುಗಳಿಂದ ಕಾರ್ತವೀರ್ಯನ ಸೈನ್ಯವನ್ನು ಸಂಹರಿಸಿದ್ದು.

೯೪. ಕಾರ್ತವೀರ್ಯನು-ಜಮದಗ್ನಿಯನ್ನು ಕೊಂದು ಕಾಮಧೇನುವನ್ನು ಒಯ್ಯಬೇಕೆಂದು ಜಮದಗ್ನಿಯ ಮೇಲೆ ಏರಿಹೋಗಲು ಕಾಮಧೇನುವು ಮುನಿಯನ್ನು ರಕ್ಷಿಸಿದ್ದು.

೯೫. ಋಷಿಗಳು ಜಮದಗ್ನಿಯ ಮೇಲೆ ಏರಿ ಹೋಗಬೇಡವೆಂದು ಕಾರ್ತವೀರ್ಯನಿಗೆ ಉಪದೇಶ ಮಾಡಿದ್ದು.

## ೩೨ನೇ ಅಧ್ಯಾಯ

೯೬. ಜಮದಗ್ನಿ ಪ್ರೇರಣೆಯಿಂದ ಕಾಮಧೇನುವು ತನ್ನ ಸೇನೆಯನ್ನೂ ಬಂಧುಗಳನ್ನೂ ನಾಶ ಮಾಡಿತೆಂದು ತಿಳಿದು ಕಾರ್ತವೀರ್ಯನು ಜಮದಗ್ನಿಯನ್ನು ಕೊಲ್ಲಲಿಕ್ಕೆ ಉಪದೇಶಮಾಡಿದ್ದು.

೯೭. ಋಷಿಗಳು ಪುನಃ ಕಾರ್ತವೀರ್ಯನಿಗೆ ಉಪದೇಶ ಮಾಡಿದ್ದು.

## ೩೩ನೇ ಅಧ್ಯಾಯ

೯೮. ಕಾರ್ತವೀರ್ಯನಿಗೂ ಕಾಮಧೇನುವಿಗೂ ಯುದ್ಧವಾದದ್ದು, ಕಾಮಧೇನುವನ್ನು ಹಿಡಿದು ಕಟ್ಟಿ ಕಡಿದದ್ದು,

೯೯. ಕ್ರೋಧವು ಆ ಸಮಯದಲ್ಲಿ ಬಂದು ತನ್ನನ್ನು ಸ್ವಲ್ಪ ಕಾಲಗ್ರಹಣ ಮಾಡೆಂದು ಜಮದಗ್ನಿಗೆ ಬೇಡಿಕೊಂಡದ್ದು.

## ೩೪ನೇ ಅಧ್ಯಾಯ

೧೦೦. ಪುರುಷ ರೂಪವನ್ನು ಧರಿಸಿ ಕ್ರೋಧವು ಜಮದಗ್ನಿಗೆ ಅನೇಕ ರೂಪದಿಂದ ಹೇಳಿಕೊಂಡದ್ದು. ಜಮದಗ್ನಿಯು ಉತ್ತರಕೊಡದಿರುವದು,

೧೦೧. ಕಾಮಧೇನು ಓಡಿಬಂದು ಜಮದಗ್ನಿಯನ್ನು ಹಿಂಬಾಲಿಸಿದ್ದು.

೧೦೨. ಜಮದಗ್ನಿ ಕ್ರೋಧವನ್ನು ತ್ಯಜಿಸಿದ್ದರಿಂದ ಅಶಕ್ತನಾಗಿ ನುಡಿದದ್ದು.

೧೦೩. ಜಮದಗ್ನಿಯನ್ನು ಕಡಿದು ಕೊಂದದ್ದು. ಆಗ ಜಮದಗ್ನಿ ಮೇಲೆ ಬಿದ್ದ ರೇಣುಕೆಯ ದೇಹದ ಮೇಲೆ ೨೧ ಘಾಯಗಳನ್ನು ಮಾಡಿ

ಕಾರ್ತವೀರ್ಯನು ಹೋದದ್ದು. ಕಾಮಧೇನುವು ಸ್ವರ್ಗಕ್ಕೆ ಹೋದದ್ದು. ರೇಣುಕೆಯು ಆರ್ತಧ್ವನಿಯಿಂದ ಪರಶುರಾಮನನ್ನು ಕರೆದದ್ದು.

### ೩೫ನೇ ಅಧ್ಯಾಯ

೧೦೪. ಪರಶುರಾಮನು ಕೈಲಾಸದಿಂದ ಬಂದು ನಡೆದ ವಿಷಯವನ್ನು ಜನನಿಯಿಂದ ಕೇಳಿ ಕಾರ್ತವೀರ್ಯನನ್ನು ಕೊಲ್ಲುವದಕ್ಕೆ ಸಿದ್ಧನಾದದ್ದು.

೧೦೫. ತನಗೆ ೨೧ ಘಾಯಗೊಳಿಸಿದ್ದಕ್ಕೆ ಕ್ಷತ್ರಿಯ ಕುಲವನ್ನು ೨೧ ಸಾರೆ ನಾಶಮಾಡಬೇಕೆಂದು ರೇಣುಕೆಯು ಪರಶುರಾಮನಿಗೆ ಹೇಳಿದ್ದು.

೧೦೬. ಮೊದಲು ಮೃತನಾದ ಜಮದಗ್ನಿಯ ಅಗ್ನಿ ಸಂಸ್ಕಾರದ ವ್ಯವಸ್ಥೆಯನ್ನು ನಡೆಸಿದ್ದು.

### ೩೬ನೇ ಅಧ್ಯಾಯ

೧೦೭. ಪರಶುರಾಮನು ಕಾವಡಿಯಲ್ಲಿ ಜನನಿಜನಕರನ್ನು ಹೊತ್ತುಕೊಂಡು ಅಗ್ನಿ ಸಂಸ್ಕಾರಕ್ಕೆ ಯೋಗ್ಯ ಪುಣ್ಯ ಕ್ಷೇತ್ರವನ್ನು ಶೋಧಿಸುತ್ತ ಬಂದದ್ದು.

೧೦೮. ಸಹ್ಯಾದ್ರಿ ಬೆಟ್ಟದ ಕಣಿವೆಯ ಮಾರ್ಗವಾಗಿ ಉಗರಗೊಳ್ಳದ ದತ್ತಾತ್ರಿಯಾಶ್ರಮಕ್ಕೆ ಬಂದದ್ದು.

೧೦೯. ಆಗ ಅಗ್ನಿಸಂಸ್ಕಾರದಲ್ಲಿ ತಾನು ಸತಿ ಹೋಗುವ ಇಚ್ಛೆಯನ್ನು ರೇಣುಕೆಯು ಪರಶುರಾಮನಿಗೆ ಹೇಳಿದ್ದು.

೧೧೦. ಅಗ್ನಿಸಂಸ್ಕಾರಕ್ಕಾಗಿ ಸಕಲ ಪವಿತ್ರ ತೀರ್ಥಗಳಲ್ಲಿ ಸ್ನಾನಮಾಡಿ ಬರಲಿಕ್ಕೆ ದತ್ತಾತ್ರೆಯು ಪರಶುರಾಮನಿಗೆ ಹೇಳಿದ್ದು.

### ೩೭ನೇ ಅಧ್ಯಾಯ

೧೧೧. ಪರಶುರಾಮನು ಬಾಣಪ್ರಯೋಗದಿಂದ ಹೊಡೆಯಲು ಗಂಗಾ ಯಮುನಾ ಸರಸ್ವತಿ ಗೋದಾವರೀ ಮೊದಲಾದ ಮಹಾನದಿಗಳು ಚಕ್ರಪುಷ್ಕರಣಿ ತೀರ್ಥಗಳಾಗಿ ಪರ್ವತದಿಂದ ಮೇಲೆ ಎಸೆಯ ಹತ್ತಿದ್ದು ಅದೇ ಎಣೆಗೊಂಡ ತೀರ್ಥವಾದದ್ದು.

೧೧೨. ಎಣೆಗೊಂಡ ತೀರ್ಥದಲ್ಲಿ ಸ್ನಾನಮಾಡಿ ಅಗ್ನಿಸಂಸ್ಕಾರ ಮಾಡಲು ರೇಣುಕಾದೇವಿಯು ಆ ಅಗ್ನಿಯಲ್ಲಿ ಸತಿಹೋದದ್ದು. ಆಗ ಪರಶು ರಾಮನು ಜನನಿಜನಕರನ್ನು ಪ್ರಾರ್ಥಿಸಲಾಗಿ ಇಬ್ಬರು ಅಗ್ನಿಯೊಳ ಗಿಂದ ಹೊರಗೆ ಬಂದು ದರ್ಶನ ಕೊಟ್ಟದ್ದು.

೧೧೩. ಎಲ್ಲ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ ರೇಣುಕಾದೇವಿಯಲ್ಲಿ ಅಂತರ್ಧಾನವಾದದ್ದು.

೧೧೪. ಸರ್ವ ಪರ್ವತಗಳು ರೇಣುಕಾ ಗಿರಿಯಲ್ಲಿ ಅಂತರ್ಧಾನವಾದದ್ದು.

## ೩೮ನೇ ಅಧ್ಯಾಯ

೧೧೫ ಜನನಿಜನಕರು ಪುನಃ ಉತ್ಪನ್ನರಾಗಿ ದರ್ಶನ ಕೊಟ್ಟದ್ದಕ್ಕೆ ಪರಶು ರಾಮನು ಸಂತುಷ್ಟನಾದದ್ದು.

೧೧೬. ರೇಣುಕಾದೇವಿಯ ಅಪ್ಪಣೆಯಂತೆ ಮಹಿಷ್ಮತಿ ನಗರಕ್ಕೆ ಮುತ್ತಿಗೆ ಹಾಕಿ ಕಾರ್ತವೀರ್ಯಾರ್ಜುನನನ್ನು ಕೊಲ್ಲಲಿಕ್ಕೂ ೨೧ ಸಾರೆ ಕ್ಷತ್ರಿಯ ಕುಲವನ್ನು ನಾಶಮಾಡಲಿಕ್ಕೂ ಮಾರ್ಕಂಡೇಯ ಮುನಿಯ ಆಶ್ರಮಕ್ಕೆ ಭೂತವೇತಾಳಗಳು ಬಾಧೆಕೊಡುತ್ತಿದದ್ದನ್ನು ನಿವಾರಣೆ ಮಾಡಿದ್ದು.

## ೩೯ನೇ ಅಧ್ಯಾಯ

೧೧೭. ಶ್ರೀ ಪರಶುರಾಮನು ಬಂದ ವಾರ್ತೆಯನ್ನು ಕೇಳಿ ಕಾರ್ತವೀರ್ಯನು ಆಪತ್ತಿನೊಳಗೆ ಬಿದ್ದದ್ದು.

೧೧೮. ಕಾರ್ತವೀರ್ಯನು ತಾನು ಕಂಡದ್ದು ಸ್ವಪ್ನದಿಂದ ಚಿಂತೆಗೊಳಗಾದದ್ದು.

೧೧೯. ಶ್ರೀ ಪರಶುರಾಮನು ಕಾರ್ತವೀರ್ಯನನ್ನು ಯುದ್ಧಕ್ಕೆ ಕರೆದದ್ದು.

## ೪೦ನೇ ಅಧ್ಯಾಯ

೧೨೦. ಶ್ರೀ ಪರಶುರಾಮನು ಯುದ್ಧಮಾಡುವ ಕಾಲದಲ್ಲಿ ಶ್ರೀ ಗಣೇಶ ವಿಷ್ಣು ಮೊದಲಾದವರು ಸಹಾಯ ಮಾಡಿದ್ದು.

೧೨೧. ಶ್ರೀ ಪರಶುರಾಮನು ಕಾರ್ತವೀರ್ಯನ ಸೈನ್ಯವನ್ನೆಲ್ಲ ನಾಶಮಾಡಿದ್ದು.

೧೨೨. ಕಾರ್ತವೀರ್ಯನ ಸಾವಿರಭುಜಗಳನ್ನು ಕತ್ತರಿಸಿದ್ದು.

೧೨೩. ಕಾರ್ತವೀರ್ಯನನ್ನು ಕೊಂದು ವಿಜಯ ಧ್ವಜವನ್ನು ಮೆರೆಸಿದ್ದು.

೧೨೪. ಜನನಿಯಾದ ಶ್ರೀ ರೇಣುಕೆಯ ಬಳಿಗೆ ಬಂದು ತನ್ನ ವಿಜಯದ ವಾರ್ತೆಯನ್ನು ಅರುಹಿದ್ದು.

೧೨೫. ವೇದಗಳು ಶ್ರೀ ದೇವಿಯ ದರ್ಶನದಿಂದ ಪರಮಾನಂದಪಟ್ಟದ್ದು.

೧೨೬. ಶ್ರೀ ವಿಷ್ಣುವು ವಾಸಮಾಡಿದ ಶ್ರೀ ದೇವಿಯ ಗರ್ಭವನ್ನು ನೋಡಲು ಸತ್ಯಲೋಕಕ್ಕಿಂತ ಇಲ್ಲಿಯೇ ಹೆಚ್ಚು ಸುಖವೆನಿಸಿದ್ದರಿಂದ ವೇದಗಳು ಅಲ್ಲಿಯೇ ನಿಂತದ್ದು.

೧೨೭. ಶ್ರೀ ಬ್ರಹ್ಮದೇವರು ವೇದಗಳು ಕಾಣದೆ ಚಿಂತನೆ. ಶ್ರೀ ಹರಿಯ ಕಡೆಗೆ ಹೋದದ್ದು.

೧೨೮. ಶ್ರೀ ಹರಿಯು ಶ್ರೀ ದೇವಿಯ ಗರ್ಭದಲ್ಲಿ ಆನಂದದಿಂದ ಇರುವವೆಂದು ಹೇಳಿದ್ದು. ಶ್ರೀ ಮಾತೃತೀರ್ಥದಲ್ಲಿ ಸ್ನಾನವಂಗೈದು ಆ ಶ್ರೀ ದೇವಿಯನ್ನು ಪ್ರಾರ್ಥಿಸಲು ಶ್ರೀ ದೇವಿಯ ಮುಖದಿಂದ ವೇದಗಳು ಉದ್ಭವಿಸಿದ್ದು.

೧೨೯. ಶ್ರೀ ರೇಣುಕಾ ಜಮದಗ್ನಿಯರು ಸಂತುಷ್ಟರಾಗಿ ಅದೇ ಅಲಕಿ ಗ್ರಾಮ ಅಂದರೆ ಉಗರಗೊಳ್ಳದಲ್ಲಿ ತನ್ನ ಎಲ್ಲ ಮಕ್ಕಳು ಮೊಮ್ಮಕ್ಕಳು ಸೇವಾ ಸುಶ್ರೂಷೆಗಾಗಿ ಅಲ್ಲಿ ವಾಸಮಾಡಬೇಕೆಂದು ಆಜ್ಞಾಪಿಸಿ ತಾನೂ ಮತ್ತು ಶ್ರೀ ಜಮದಗ್ನಿಯೂ, ಪರಶುರಾಮನೂ ಶಿಲಾ ಮೂರ್ತಿಯಾಗಿ ಉಳಿದದ್ದು.

॥ ಶ್ರೀ ರೇಣುಕಾ ಪ್ರಸನ್ ॥

# ವ್ಯಾಸೋಕ್ತ ಸ್ಕಂದ ಪುರಾಣದೊಳಗಿನ
# ರೇಣುಕಾ ಮಹಾತ್ಮೆ

## ೧ನೇ ಅಧ್ಯಾಯ

**ಋಷಿಗಳು:**— ಎಲೈ ಸ್ಕಂದಪ್ರಭುವೆ, ನಿಮ್ಮಿಂದ ಹೇಳಲ್ಪಟ್ಟ ಭಕ್ತಿಮುಕ್ತಿ ದಾಯಕವಾದ ಪಾಪರಹಿತವಾದ ಮೇಖಲತೀರ್ಥದ ಮಹಿಮೆಯನ್ನು ನಾವು ಕೇಳಿದೆವು. ಆದರೆ ದಕ್ಷಿಣ ತಟದಲ್ಲಿದ್ದ ಮೂರು ಋಣಗಳನ್ನು ನಾಶಮಾಡತಕ್ಕಂಥ ಪುಣ್ಯಕಾರಕವಾದಂಥ ಮಾತೃತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾದ ತೀರ್ಥದ ವಿಷಯವಾಗಿ ವಿಸ್ತಾರವಾಗಿ ಹೇಳಬೇಕು. ಏಕವೀರಾದೇವಿಯು ಯಾರು, ಜಮದಗ್ನಿಯು ಯಾರು, ಕ್ಷತ್ರಿಯಾಂತಕ ರಾಮನು ಯಾವಾಕೆಯ ಗರ್ಭದಲ್ಲಿ ಹುಟ್ಟಿದನು, ಜಮದಗ್ನಿಯು ಎಲ್ಲಿ ಹುಟ್ಟಿದನು, ಯಾವನು ಆತನ ಕಾಮಧೇನುವನ್ನು ಅಪಹರಿಸಿದನು, ಕಾರ್ತವೀರ್ಯನು ಆ ರಾಮನಿಂದ ಹೇಗೆ ಸಂಹರಿಸಲ್ಪಟ್ಟನು ಇದನ್ನೆಲ್ಲ ಸವಿಸ್ತಾರವಾಗಿ ಹೇಳಬೇಕು.

**ಸ್ಕಂದ:**—ಹೇ ಪುಣ್ಯಶಾಲಿಗಳಾದ ಋಷಿಗಳೇ, ಕೇಳಿರಿ. ಪೂರ್ವದಲ್ಲಿ ದೇವತೆಗಳಿಗೂ ದಾನವರಿಗೂ ಭಯಂಕರವಾದ ಯುದ್ಧವಾಯಿತು. ಅದರಲ್ಲಿ ಮಾಯೆಯಲ್ಲಿ ಬಲ್ಲಿದರಾದ ದೈತ್ಯರು ದೇವತೆಗಳನ್ನು ಗೆದ್ದು ಸ್ವರ್ಗದಿಂದ ಹೊರಗೆ ಹಾಕಲಾಗಿ, ಇಂದ್ರ ಮೊದಲಾದ ದೇವತೆಗಳೆಲ್ಲರೂ ಕೂಡಿ ಕ್ಷೀರಸಾಗರದಲ್ಲಿ ಶೇಷಶಯ್ಯಾದಲ್ಲಿ ಸ್ಥಿತನಾದ ವಿಷ್ಣುವಿನ ಕಡೆಗೆ ಬಂದು ಅತ್ಯಂತ ಭಕ್ತಿಯಿಂದ ನಮಿಸಿ, ಹಸ್ತಾಂಜಲಿಬದ್ಧರಾಗಿ ಸ್ತುತಿಸಿ ಸಂತೋಷಪಡಿಸಿದರು.

**ದೇವತೆಗಳು:**—ಹೇ ಜಗನ್ನಾಯಕನಾದ ಹರಿಯೇ, ಮತ್ಸ್ಯ ಮೊದಲಾದ ಅವತಾರಗಳಿಂದ ಈ ವಿಶ್ವವು ನಿನ್ನಿಂದ ಉದ್ಧರಿಸಲ್ಪಟ್ಟಿತು. ದೈತ್ಯದಾನವ

ರಿಂದ ನಮ್ಮೆಲ್ಲರನ್ನು ಸಂರಕ್ಷಿಸಲಿಕ್ಕೆ ನೀನೇ ಸಮರ್ಥನು. ನಮ್ಮನ್ನು ಸಂರಕ್ಷಿಸುವವನಾಗಿಯೂ, ಜಗತ್ತಿಗೆ ಕರ್ತನಾಗಿಯೂ, ದಾನವರನ್ನು ನಾಶಮಾಡುವವನಾಗಿಯೂ, ಬಲಿಷ್ಠ ಲವಣಾಸುರನನ್ನು ನಾಶಗೈದವ ನಾಗಿಯೂ ಇರುವ ಲಕ್ಷ್ಮಿಗೆ ಪತಿಯಾಗಿಯೂ, ಸರ್ವ ದೇವತೆಗಳಿಗೆ ಒಡೆಯನಾಗಿಯೂ ಇರುವ ಪ್ರಭುವೇ ನಿನಗೆ ನಮಸ್ಕಾರವು. ನೀನು ಅದ್ವಿತೀಯ ಪುರುಷನು, ನಿತ್ಯನು, ಸುಖದಾಯಕನು, ಪರಮೇಶ್ವರನು. ನೀನೊಬ್ಬನೇ ಅನೇಕ ಆಕಾರವಾಗಿ ತೋರುತ್ತಿ. ಹೇ ಪರಬ್ರಹ್ಮರೂಪ ಹರಿಯೇ ನಿನಗೆ ನಮಸ್ಕಾರವು.

**ಸ್ಕಂದ:**— ಈ ಪ್ರಕಾರ ದೇವತೆಗಳು ಭಯಭಕ್ತಿಯಿಂದ ಸ್ತೋತ್ರಮಾಡಲು ಭಗವಾನ್ ಗರುಡಧ್ವಜನು ಮುಗುಳುನಗೆ ನಗುತ್ತಾ ಆನಂದಭರಿತನಾಗಿ ದೇವತೆಗಳಿಗೆ ಹೀಗೆ ಅಂದನು:

**ವಿಷ್ಣು:**—ಎಲೈ ಸುರರೇ, ಯಾರಿಂದ ನಿಮಗೆ ಭಯವೂ ದುಃಖವೂ ಸಂಭವಿಸಿದೆ ಇದನ್ನು ಹೇಳಿರಿ. ನಾನು ಶೀಘ್ರವಾಗಿ ಆ ಭಯವನ್ನು ನಾಶ ಮಾಡುವೆನು.

**ದೇವತೆಗಳು:**—ಪ್ರಭೋ, ನಾವು ದೈತ್ಯರಿಂದ ಸೋಲಿಸಲ್ಪಟ್ಟು ಸ್ವರ್ಗದಿಂದ ತಳ್ಳಲ್ಪಟ್ಟಿದ್ದೇವೆ. ನಮಗೆ ಇರಲಿಕ್ಕೆ ಆಶ್ರಯವಿಲ್ಲ, ಕಾರಣ ತಮಗೆ ಶರಣಬಂದಿದ್ದೇವೆ. ತೀವ್ರವಾಗಿ ಆ ದಾನವರವನ್ನು ಸಂಹರಿಸಿ ನಮ್ಮನ್ನು ರಕ್ಷಿಸಬೇಕು.

**ವಿಷ್ಣು:**—ಎಲೈ ಅಮರರೇ, ನಾನು ಯಾವಾಗ ಅದಿತಿಯ ಗರ್ಭದಿಂದ ದ್ವಿಜರೂಪದಿಂದ ಜನಿಸುವೆನೋ ಆಗ ಸಕಲ ದಾನವರನ್ನು ಸಂಹರಿಸುವೆನು. ಇಪ್ಪತ್ತೊಂದು ಸಾರೆ ಕ್ಷತ್ರಿಯ ಕುಲವನ್ನು ನಾಶಮಾಡಿ, ಶುಭವಾದ ಯಜ್ಞಮಾಡಿ ಅದರಲ್ಲಿ ಬ್ರಾಹ್ಮಣರಿಗೆ ದಕ್ಷಿಣಾರ್ಥ ಸರ್ವ ಪೃಥ್ವಿಯನ್ನು ಕೊಟ್ಟುಬಿಡುವೆನು. ಏಕವೀರಾ ಎಂಬುವ ಹೆಸರಿನಿಂದ ಪ್ರಸಿದ್ಧನಾಗಿ ನನ್ನ ತಾಯಿಯಾದ ಅದಿತಿಯು ಸರ್ವ ಭಕ್ತರ ಇಚ್ಛೆ ಪೂರ್ಣ ಮಾಡಲಿಕ್ಕೆ ಭೂತಲದಲ್ಲಿ ಜನಿಸುವಳು. ಆದರೂ ನೀವು ಶೀಘ್ರ ಹೋಗಿ ಆಕೆಯನ್ನು ಪ್ರಾರ್ಥಿಸಿರಿ. ಆಕೆಯು ನನ್ನನ್ನು ಗ್ರಹಣಮಾಡಲಿಕ್ಕೆ ಶಕ್ತಳಾದರೆ ನಾನು ಆಕೆಯ ಗರ್ಭದಲ್ಲಿ ಜನಿಸುವೆನು.

**ಸ್ಕಂದ:—** ಈ ಪ್ರಕಾರ ವಿಷ್ಣುವಿನ ವಚನವನ್ನು ಕೇಳಿ, ದೇವತೆಗಳು ಪರಮಾನಂದದಿಂದ ಆತನಿಗೆ ನಮಸ್ಕರಿಸಿ, ಅದಿತಿಯ ಕಡೆಗೆ ಹೋಗಿ, ಭಯ ಭಕ್ತಿಯಿಂದ ನಮಸ್ಕಾರ ಮಾಡಿ ಪರಮಾನಂದಭರಿತರಾಗಿ ಸ್ತುತಿಸಿ, ಜಗಜ್ಜನನಿಯಾದ ದೇವಮಾತೆಗೆ ಹೀಗೆ ಅಂದರು:

**ದೇವತೆಗಳು:—** ಸರ್ವರ ಇಷ್ಟಿಯನ್ನು ಪೂರ್ಣ ಮಾಡತಕ್ಕಂಥ ಹೇ ತಾಯಿಯೇ, ಏನು ಯೋಚನೆ ಮಾಡುತ್ತೀ, ನಮ್ಮನ್ನು ದೈತ್ಯರು ಗೆದ್ದು, ಸ್ವರ್ಗದಿಂದ ದೂಡಿ ಅತ್ಯಂತ ಕಷ್ಟಕೊಡುತ್ತಾರೆ. ನಮ್ಮನ್ನು ಸಂರಕ್ಷಿಸ ಲಿಕ್ಕೆ ನೀನೇ ಸಮರ್ಥಳು. ಹೇ ದೇವಿಯೇ, ಹರಿಯನ್ನು ನಿನ್ನ ಉದರದಲ್ಲಿ ಧರಿಸಿ ಮೂರು ಲೋಕವನ್ನು ರಕ್ಷಿಸು. ದುಷ್ಟ ದೈತ್ಯರೆಲ್ಲ ನಾಶವಾಗ ಲಾಗಿ ನೀನೊಬ್ಬಳೇ ಉಳಿಯುವಿ.

**ಅದಿತಿ:—**ಎಲೈ ದೇವತೆಗಳಿರಾ, ಘೋರ ತಪಸ್ಸಿನ ಹೊರತು ಮತ್ತು ಬಲವಾದ ಶಕ್ತಿಯ ಹೊರತು ಆ ಹರಿಯನ್ನು ನನ್ನ ಗರ್ಭದಲ್ಲಿ ಧರಿಸಲು ಶಕ್ತಳಲ್ಲ. ಯಾಕಂದರೆ ಆ ಅಸುರವೈರಿಯಾದ ಪದ್ಮನಾಭನ ಉದರ ದೊಳಗೆ ಸರ್ವ ಜಗತ್ತು ಸ್ಥಿತವಾಗಿರುತ್ತದೆ. ಆತನು ತರ್ಕಕ್ಕೆ ನಿಲುಕ ದವನೂ, ಪ್ರಮಾಣಾತೀತನೂ, ಜಗತ್ತಿಗೆ ಆಧಾರನೂ, ಶ್ರೇಷ್ಠನೂ, ಅನಂತನೂ, ಅಕಲ್ಪನೂ, ಪರಮೇಶ್ವರನೂ, ಮೂರು ಲೋಕವನ್ನು ಧರಿಸಿದವನೂ ಇದ್ದಾನೆ. ಇಂಥ ಭಗವಾನ್ ಹರಿಯನ್ನು ಒಡಲೊಳಗೆ ಧರಿಸಲಿಕ್ಕೆ ಯಾರೂ ಶಕ್ತರಾಗರು.

**ದೇವತೆಗಳು:—**ಹೇ ತಾಯಿಯೇ, ಲೋಕೋದ್ಧಾರಕ್ಕಾಗಿ ತಪಸ್ಸುಮಾಡ ಲಿಕ್ಕೆ ಹೋಗು. ಸರ್ವ ಸುರರೂ, ಗಂಧರ್ವರೂ, ಕಿನ್ನರರೂ, ಮಹಾ ತ್ಮರೂ ಮಹರ್ಷಿಗಳೂ ನಿನಗೆ ತಮ್ಮ ತೇಜಸ್ಸನ್ನು ಕೊಡುವರು.

**ಸ್ಕಂದ:—**ಹೀಗೆ ಅಂದು ಸುರರು, ಗಂಧರ್ವರು, ಸಿದ್ಧರು, ವಿದ್ಯಾಧರರು, ಉರಗರು, ರುದ್ರರು, ಋಷಿಗಳು ಮೊದಲಾದವರು ತಮ್ಮ ತಮ್ಮ ತೇಜಸ್ಸನ್ನು ದೇವಿಗೆ ಕೊಟ್ಟರು. ಆ ತೇಜಸ್ಸಿನಿಂದ ಕೂಡಿದ ಅದಿತ ದೇವಿಯು ದೇವತೆಗಳನ್ನು ಕೂಡಿಕೊಂಡು ತಪಸ್ಸುಮಾಡಲಿಕ್ಕೆ ಕೈಲಾಸ ಪರ್ವತಕ್ಕೆ ಹೋದಳು.

————

*

# ೨ನೇ ಅಧ್ಯಾಯ

**ಸ್ಕಂದ:**—ಆ ಮೇಲೆ ಬ್ರಹ್ಮಾದಿ ದೇವತೆಗಳೂ, ಸಿದ್ಧಚಾರಣರೂ, ಋಷಿಗಳೂ, ಆ ಅದಿತಿದೇವಿಗೆ ಏಕವೀರಾ ಎಂಬ ನಾಮವನ್ನು ಕೊಟ್ಟರು. ನಂತರ ದೇವತೆಗಳ ತಾಯಿಯಾದ ಶುಭಾನನಳಾದ ಅದಿತಿಯು ಕೈಲಾಸಕ್ಕೆ ಹೋಗಿ, ಯಾವನ ಸಂಕೀರ್ತನೆಯಿಂದ ಸರ್ವ ಮಂತ್ರಫಲ ಪ್ರಾಪ್ತವಾಗುವದೋ, ಸರ್ವ ಯಜ್ಞಫಲ ಪ್ರಾಪ್ತವಾಗುವದೋ ಮತ್ತು ಸರ್ವ ತೀರ್ಥಾಭಿಷೇಕಫಲ ಪ್ರಾಪ್ತಗುವದೋ ಅಂಥ ಪರಮಾತ್ಮನನ್ನು ಅತ ಂತ ಭಕ್ತಿಯಿಂದ ಅರ್ಚಿಸಲಿಕ್ಕೆ ಪ್ರಾರಂಭಮಾಡಿದಳು. ಅತಿ ಸದ್ಗಂಧಯುಕ್ತ ಕುಸುಮಗಳಿಂದಲೂ, ಉತ್ತಮವಾದ ಚಂದನಗಳಿಂದಲೂ, ಬಹು ಮಾಧುರ್ಯವಾದ ಫಲಗಳಿಂದಲೂ ಹರನನ್ನು ಸೇವಿಸಿದಳು ಮತ್ತು ನಮಸ್ಕರಿಸಿ ಹಸ್ತಾಂಜಲಿಬದ್ಧಳಾಗಿ ಅನೇಕ ಸ್ತೋತ್ರಗಳಿಂದ ಶಿವನನ್ನು ತುಷ್ಟಿಪಡಿಸಿದಳು.

**ಅದಿತಿ:**—ಹೇ ದೇವರಿಗೆ ದೇವನಾದಂಥ ತ್ರಿಪುರ ಸಂಹಾರಮಾಡಿದ ಪರಮಾತ್ಮನೇ ಕೃಪಾಮಾಡು. ಹೇ ಬ್ರಹ್ಮಸ್ವರೂಪನೇ, ವಿಶ್ವರೂಪನೇ ನಿನಗೆ ನಮಸ್ಕಾರವು. ಹೇ ಮಂಗಲರೂಪನೇ, ಭೂತಾಧಿಪತಿಯೇ, ನಿನಗೆ ನಮಸ್ಕಾರವು.

**ಸ್ಕಂದ:**—ಈ ಪ್ರಕಾರ ದೇವತೆಗಳನ್ನು ಕೂಡಿಕೊಂಡು ಅದಿತಿಯು ಶಿವನನ್ನೂ ಜಗನ್ಮಾತೆಯಾದ ಪಾರ್ವತಿಯನ್ನೂ ಸ್ತೋತ್ರಗಳಿಂದ ತುಷ್ಟಿಪಡಿಸಿದಳು. "ಹೇ ಲೋಕಮಾತೆಯೇ ನಿನ್ನ ಸ್ವರೂಪವು ದೇವದಾನವರಿಂದ ಚಿಂತಿಸಲಿಕ್ಕೆ ಅಶಕ್ಯವಾದದ್ದು. ಅತ್ಯಂತ ಭಕ್ತಿಯಿಂದ ನಮಸ್ಕರಿಸುತ್ತೇನೆ. ಹೇ ಸುರೇಶ್ವರೀ ನನ್ನ ಮೇಲೆ ಕೃಪೆಮಾಡು. ಪಾರ್ವತಿಯೇ ನೀನೇ ಜಗನ್ಮಾತೆಯು, ನೀನೇ ಗಾಯತ್ರಿಯು, ನೀನೇ ಸರಸ್ವತಿಯು, ಸರ್ವರ ಇಚ್ಛೆಯನ್ನು ಪೂರ್ಣಮಾಡುವವಳು, ಅಪ್ರತರ್ಕ್ಯಳು, ನೀನೇ ಈಶ್ವರ ಕಲೆಯು, ಬ್ರಾಹ್ಮಿ ವೈಷ್ಣವೀ ನೀನೇ, ಹೇ ಸರ್ವ ದೇವೇಶಿ ನಿನ್ನನ್ನೇ ಅನನ್ಯಭಾವದಿಂದ ಶರಣುಹೊಕ್ಕಂಥಾ ನನಗೆ ವರವನ್ನು ಕೊಡು" ಎಂದು ಭಕ್ತಿಯಿಂದ ಬೇಡಿಕೊಳ್ಳಲು ಪರಮಾತ್ಮನು ಪಾರ್ವತಿ ಸಹಿತ ಅದಿತಿಯ




ಶ್ರೀ ಪಾರ್ವತಿ-ಪರಮೇಶ್ವರರು ಅದಿತಿದೇವಿಯ ತಪಸ್ಸು ಮೆಚ್ಚಿ
ವರದಾನ ಮಾಡುವದು

ಭಕ್ತಿ! ಮೆಚ್ಚಿ, ಎಲ್ಲಾ ದೇವತೆಗಳಿಂದ ವಂದ್ಯಳಾದ ಅದಿತಿದೇವಿಯೇ ನಾನು ನಿನ್ನ ಭಕ್ತಿಯಿಂದ ತುಷ್ಟನಾಗಿದ್ದೇನೆ. ನಿನ್ನ ವಾಂಛಿತವನು ಬೇಡಿಕೊ, ತಡಮಾಡದಲೆ ಕೊಡುವೆನು.

**ಅದಿತಿ:—**ಹೇ ಭಕ್ತವತ್ಸಲನೇ, ಅಯೋನಿಜದಿಂದುದಿಸಿದ ದೇಹವನ್ನು ನನಗೆ ಕೊಡು ಮತ್ತು ಕಸ್ಯಪಾನ್ವಯದಲ್ಲಿ ಹುಟ್ಟಿ ನೀನು ನನಗೆ ಪತಿಯಾಗ ಬೇಕು. ದೇವತೆಗಳ ಪಾಲನೆಗೋಸುಗವಾಗಿಯೂ, ಧರ್ಮಸಂರಕ್ಷಣಾರ್ಥವಾಗಿಯೂ, ಪುತ್ರನನ್ನು ಪಡೆಯುವ ಇಚ್ಛೆಯಿಂದ ನಾನು ಜನಿಸ್ಸುವೆನು. ತ್ರಿಭುವನೇಶ್ವರನಾದ ಹರಿಯು ನನ್ನ ಗರ್ಭದಲ್ಲಿ ಜನಿಸಿ ರಾಮನೆಂಬ ಹೆಸರನ್ನು ಪಡೆದು ನಿಃಕ್ಷತ್ರಿಯ ಪೃಥ್ವಿಯನ್ನು ಮಾಡಿ ನಿನ್ನನ್ನು ತುಷ್ಟಿ ಪಡಿಸುವನು.

**ಸ್ಕಂದ:—**ಹೀಗೆ ಅದಿತಿಯಿಂದ ಪ್ರಾರ್ಥಿಸಲ್ಪಟ್ಟ ಪರಮಾತ್ಮನು ಆಕೆಗೆ ವರ ಕೊಡುವದಕ್ಕೆ ಪಾರ್ವತಿಯನ್ನು ಕುರಿತು ಇಂತು ಪೇಳಿದನು.

**ಈಶ್ವರ:—**ಹೇ ಪಾರ್ವತಿ, ಸರ್ವ ಕಾಮಿತವನ್ನು ಪೂರ್ಣಮಾಡತಕ್ಕಂಥ ನಿನ್ನ ದಿವ್ಯರೂಪವನ್ನು ಪ್ರಸನ್ನಮನಸ್ಸಿನಿಂದ ಪರಮಭಕ್ತಳಾದ ಅದಿತಿಗೆ ಶೀಘ್ರ ಕೊಡು.

**ಸ್ಕಂದ:—**ಈ ಪ್ರಕಾರ ಪರಮಾತ್ಮನ ವಚನವನ್ನು ಕೇಳಿ ಪಾರ್ವತಿಯು ಹರುಷದಿಂದ ತನ್ನ ದಿವ್ಯ ತೇಜಸ್ಸನ್ನು ಕೊಟ್ಟು ವರವನ್ನು ಕೊಟ್ಟಳು.

**ಪಾರ್ವತಿ:—**ಹೇ ಅದಿತಿಯೇ, ಸರ್ವಲಕ್ಷಣಸಂಪನ್ನಳಾಗಿಯೂ, ಸರ್ವ ವಾಂಛಿತವನ್ನು ಪೂರ್ಣಮಾಡುವವಳಾಗಿಯೂ, ನನ್ನ ಸ್ವರೂಪಳಾಗಿ ಪರಮೇಶ್ವರನ ಪ್ರಿಯ ಪತ್ನಿಯಾಗುವಿ. ನಿನ್ನ ದರ್ಶನಮಾತ್ರದಿಂದ ಸರ್ವ ಜನರು ಇಹಲೋಕದ ಸುಖವನ್ನೂ ಮುಕ್ತಿಯನ್ನೂ ನಿಶ್ಚಯವಾಗಿ ಪಡೆಯುವರು ಸತ್ಯವು ಸತ್ಯವು.

---

## ೩ನೇ ಅಧ್ಯಾಯ

**ಸ್ಕಂದ:**—ಎಲೈ ಮುನಿಗಳಿರಾ, ಪಾರ್ವತಿಯು ವರವನ್ನು ಕೊಟ್ಟ ಮೇಲೆ ಪರಮಾತ್ಮನು ಅತ್ಯಾನಂದದಿಂದ ಅದಿತಿದೇವಿಗೆ ಇಚ್ಛಿತ ವರವನ್ನು ಕೊಡುವಂಥವನಾದನು.

**ಈಶ್ವರ:**—ಹೇ ಅದಿತಿಯೇ, ನೀನು ಅನ್ಯದೇಹವನ್ನು ಹೊಂದಿದ ಕೂಡಲೇ ನಾನು ಅನ್ಯದೇಹವನ್ನು ಹೊಂದಿ ನಿನಗೆ ಪತಿಯಾಗುವೆನು ಮತ್ತು ಸರ್ವ ಲಕ್ಷಣ ಸಂಪನ್ನರಾದ, ಸರ್ವಶಾಸ್ತ್ರವಿಶಾರದರಾದ, ಮಹಾತೇಜಸ್ವಿಗಳಾದ ವಸ್ವಾದಿ ಪುತ್ರರನ್ನು ಉತ್ಪತ್ತಿ ಮಾಡುವೆನು. ನನ್ನ ಪ್ರಸಾದದಿಂದ ನೀನು ಏಕವೀರಾ ಎಂಬ ನಾಮವನ್ನು ಪಡೆಯುವಿ. ನಿನ್ನಲ್ಲಿ ಐದು ಮಂದಿ ಮನೋಹರರಾದ ಪುತ್ರರನ್ನು ಹುಟ್ಟಿಸುವೆನು. ನೀನು ನನ್ನನ್ನು ಪತಿಯಾಗಲಿಚ್ಛಿಸಿದರೆ ಶೀಘ್ರವಾಗಿ ಅನ್ಯದೇಹವ ಧರಿಸಲಿಕ್ಕೆ ಪ್ರಯತ್ನ ಮಾಡು.

**ಸ್ಕಂದ:**—ಹೀಗೆ ಶಂಕರನಿಂದ ವರವನ್ನು ಪಡಕೊಂಡು ಪರಮಾನಂದದಿಂದ ಅದಿತಿದೇವಿಯು ಅಲ್ಲಿಯೇ ಅಂತರ್ಧಾನವಾದಳು.

**ಋಷಿಗಳು:**—ಹೇ ಸ್ಕಂದಪ್ರಭುವೇ, ದೇವತೆಗಳ ತಾಯಿಯಾದ ಅದಿತಿ ದೇವಿಯು ಏಕವೀರಾ ಎಂಬ ಹೆಸರಿನಿಂದ ಎಲ್ಲಿ ಜನಿಸಿವಳು ಮತ್ತು ತನ್ನನ್ನು ಹೊಂದಿದಂಥ ಭಕ್ತರ ಕರ್ಮಬಂಧವನ್ನು ನಾಶಮಾಡಿ ಅವರಿಗೆ ಇಚ್ಛಿತ ವರವನ್ನು ಕೊಟ್ಟು ಉದ್ಧರಿಸುವ ಆಕೆಯ ಮಹಿಮೆಯನ್ನು ಸವಿಸ್ತಾರವಾಗಿ ನಮಗೆ ಹೇಳಬೇಕು.

**ಸ್ಕಂದ:**—ಎಲೈ ಋಷಿಗಳೇ, ಆ ಮಹಾಮಹಿಮಳ ಪ್ರಭಾವವನ್ನು ಹೇಳಲಿಕ್ಕೆ ಬ್ರಹ್ಮಾದಿ ದೇವತೆಗಳು ಸಹ ಶಕ್ತರಲ್ಲ. ಆದರೂ ಸಂಕ್ಷೇಪದಿಂದ ನಿಮಗೆ ಹೇಳುತ್ತೇನೆ. ಯಾವಾಕೆಯ ಗರ್ಭದಲ್ಲಿ ತ್ರಿಲೋಕಪಾಲಕನು ಮನುಜ ರೂಪದಿಂದ ಜನಿಸಿದನೋ, ಆಕೆಯ ದರ್ಶನ ಮಾತ್ರದಿಂದಲೇ ನರರಿಗೆ ಜ್ಞಾನೋದಯವಾಗುತ್ತದೆ. ಸಕಲ ಕರ್ಮಗಳ ನಾಶವು ಜ್ಞಾನದಿಂದಲೇ ಆಗುತ್ತದೆ ಆದ್ದರಿಂದ ಆ ದೇವಿಯ ದರ್ಶನದಿಂದಲೇ ಮೋಕ್ಷವಾಗುವದು. ಇದರಲ್ಲಿ ಏನೂ ಸಂದೇಹವಿಲ್ಲ. ಭಾಗೀರಥೀ ತೀರದಲ್ಲಿ ಕನ್ಯಾಕುಬ್ಜವೆಂಬ ರಮ್ಯವಾದ ಪುರವು ಸುರಸಿದ್ಧ ಋಷಿಗಳಿಂದ ಸೇವಿತವಾ

ಗಿಯೂ, ಸಜ್ಜನರಿಗೆ ವಾಸಸ್ಥಾನವಾಗಿಯೂ ಇರುವದು. ಆ ಪಟ್ಟಣದಲ್ಲಿ ಸತ್ಯಸಂಗರನಾದ, ಮಹಾ ಧಾರ್ಮಿಕನಾದ, ಸಕಲಶಾಸ್ತ್ರ ಪ್ರವೀಣನಾದ ಇಕ್ಷ್ವಾಕುವೆಂಬ ಹೆಸರಿನ ಲೋಕಪ್ರಖ್ಯಾತನಾದ ಅರಸನಿದ್ದನು ಆತನಿಗೆ ಸಕಲ ಸದ್ಗುಣಗಳಿಂದ ಶೋಭಿತನಾದ ಸರ್ವ ಧರ್ಮಾತ್ಮರೊಳಗೆ ಶ್ರೇಷ್ಠನಾದ ಇಕ್ಷ್ವಾಕು ಕುಲವರ್ಧನನಾದ ರೇಣು ಎಂಬ ಹೆಸರಿನ ಮಗ ನಿದ್ದನು. ಅವನು ಸರ್ವ ರಾಜಲಕ್ಷಣ ಸಂಪನ್ನನೂ, ದೇವದ್ವಿಜರಲ್ಲಿ ಭಕ್ತಿಯುಳ್ಳವನೂ, ನಿಗ್ರಹಾನುಗ್ರಹದಲ್ಲಿ ಶಕ್ತನೂ ಇದ್ದನು. ಮತ್ತು ಕ್ಷಮೆಯಿಂದ ಪೃಥ್ವಿಸಮನೂ, ಶೃತಿಶಾಸ್ತ್ರಾರ್ಥಕುಶಲನೂ, ವಿಷ್ಣುಭಕ್ತಿ ಪರಾಯಣನೂ ಇದ್ದನು. ಆ ರೇಣುಕ ರಾಜನು ತನಗೆ ಅತ್ಯುತ್ತಮ ಗುಣವತಿಯಾದ ಪುತ್ರಿಯು ಜನಿಸುವ ಇಚ್ಛೆಯಿಂದ ಹೆಂಡತಿಯನ್ನು ಕೂಡಿ ಕೊಂಡು ಪರಮಾತ್ಮನನ್ನು ಕುರಿತು ಘೋರ ತಪಸ್ಸು ಮಾಡಿದನು. ಆಗ ಪರಮಾತ್ಮನು ಆತನ ಭಕ್ತಿಗೆ ಮೆಚ್ಚಿ ಪಾರ್ವತೀ ಸಹ ಪ್ರತ್ಯಕ್ಷನಾಗಿ ಎಲೈ ನೃಪನೇ ನಿನ್ನ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ನಿನ್ನ ವಾಂಛಿ ತಾರ್ಥವನ್ನು ಬೇಡಿಕೋ, ಬೇಡಿದ್ದು ಕೊಡಲು ಸಿದ್ಧನಿದ್ದೇನೆ ಎಂದನು.

**ಅರಸು:**—ಹೇ ಭಕ್ತವತ್ಸಲನಾದ ಹರನೇ, ಸರ್ವಲಕ್ಷಣಸಂಪನ್ನಳಾದಂಥವ ಳಾಗಿಯೂ, ರೂಪವತಿಯಾಗಿಯೂ ಇರುವ ಕನ್ನಿಕೆಯೊಬ್ಬಳನ್ನೂ ಮತ್ತು ಸರ್ವರಿಗೆ ಹಿತಕಾರಿಯಾದ ಪುತ್ರನನ್ನೂ ದಯಪಾಲಿಸುವಂಥವನಾಗು.

**ಈಶ್ವರ:**—ಎಲೈ ಭಕ್ತಶಿರೋಮಣಿಯಾದ ನೃಪನೇ, ನಿನ್ನ ಇಚ್ಛೆಯಂತೆ ಸರ್ವಲಕ್ಷಣ ಸಂಪನ್ನಳಾದ ರೂಪವತಿಯಾದ ಪುತ್ರಿಯು ಜನಿಸುವಳು. ಅವಳ ದರ್ಶನಮಾತ್ರದಿಂದಲೇ ಪ್ರಾಣಿಗಳು ಸದ್ಗತಿಯನ್ನು ಹೊಂದುವರು. ಸರ್ವ ತೀರ್ಥಶ್ರೇಷ್ಠಳೂ, ಸರ್ವ ಶಾಸ್ತ್ರಸಮ್ಮತಳೂ, ಸರ್ವ ನರರಿಗೆ ಸಕಲಾಭೀಷ್ಟದಾಯಕಳೂ, ನನ್ನ ಕೃಪೆಯಿಂದಲಾಗುವಳು ಮತ್ತು ಶೂರಸೇನನೆಂಬ ಹೆಸರಿನಿಂದ ಪ್ರಖ್ಯಾತನಾದ ಪುತ್ರನು ಹುಟ್ಟುವನು. ಈಗ ನೀನು ಹೋಗು. ಕನ್ಯಾರ್ಥವಾಗಿ ಯಜ್ಞವನ್ನು ಮಾಡು. ದೇವ ಬ್ರಾಹ್ಮಣರ ಪೂಜೆಯನ್ನು ಮಾಡು. ಅದರಿಂದ ದೇವಸ್ತ್ರೀಯರಿಂದ ಕೂಡಿ ಉತ್ತಮ ರಾಜ್ಯವನ್ನೂ, ಐಶ್ವರ್ಯವನ್ನೂ ಕೀರ್ತಿಯನ್ನೂ, ರಾಜನೇ ನೀನು ಪಡೆಯುವಿ.

———

# ೪ನೇ ಅಧ್ಯಾಯ

**ಸ್ಕಂದ**—ಆ ಭಕ್ತಶ್ರೇಷ್ಠನಾದ ರೇಣುಕರಾಜನು ಪರಮಾತ್ಮನಿಂದ ವರವನ್ನು ಪಡೆದು, ತನ್ನ ಪುರಕೆ ಬಂದು ಕನ್ಯಾರ್ಥವಾಗಿ ಯಜ್ಞ ಮಾಡಲಿಕ್ಕೆ ಪ್ರಾರಂಭ ಮಾಡಿದನು. ಆ ಯಜ್ಞವು ಭಾಗೀರಥೀ ತೀರದಲ್ಲಿ ಬಹು ಸಮಾರಂಭದಿಂದ ಷಡ್ರಸಯುಕ್ತವಾದ ಅನ್ನಸಂತರ್ಪಣೆಯಿಂದಲೂ ವಿಪುಲ ಧನಕನಕರತ್ನಾದಿಗಳ ದಕ್ಷಿಣೆಯಿಂದಲೂ, ಅತ್ಯಂತ ಶೋಭಾಯಮಾನವಾಗಿ ನಡೆಯಿತು. ಹೀಗೆ ಶುಭವಾದ ಗಂಗಾತೀರದಲ್ಲಿ ವಿಜೃಂಭಣೆಯಿಂದ ನಡೆದ ಯಜ್ಞಕ್ಕೆ ಸುರರು, ಯಕ್ಷರು, ಗಂಧರ್ವರು, ಕಿನ್ನರರು, ಕಿಂಪುರುಷರು, ಸತ್ಯಸಂಗರರಾದ ಋಷಿಗಳು, ಅತ್ರಿ, ವಸಿಷ್ಟ, ಗಾಲವ ಜೈಮಿನಿ, ಜಾಬಾಲಿ, ಗೌತಮ, ಕುತ್ಸ, ಕೌಂಡಿನ್ಯ, ಗಾರ್ಗ್ಯ, ಭರದ್ವಾಜ ಶತಾನಂದ, ಪರಾಶರ, ದಾಲ್ಭ್ಯ, ಪುಲಸ್ತ್ಯ, ಶುನಕ, ಶೌನಕ, ನಾರದ, ಅಸಿತ, ದೇವಲ, ಕಣ್ವ, ವಿದಂಭ, ಸಹಸ್ರಪಾತ್, ಮಾರ್ಕಂಡೇಯ ಶಮೀಕ ಮೊದಲಾದ ಸರ್ವಶಾಸ್ತ್ರವಿಶಾರದರಾದ ಮುನಿಗಳು ಮತ್ತು ಇನ್ನೂ ಉತ್ತಮ ವ್ರತನಿಷ್ಠರಾದಂಥ ಅನೇಕ ಋಷಿಗಳೂ ರಾಜರ್ಷಿಗಳೂ ಬಂದರು. ಆ ಪುಣ್ಯಕಾರಕವಾದ ಯಜ್ಞಕರ್ಮದಲ್ಲಿ ಓಂ, ಶ್ರಾವಯ ಅಸ್ತು, ಔಷಟ್ ಎಂಬ ಯಜ್ಞಕಾರ್ಯದಲ್ಲಿ ಪ್ರಯೋಗಿಸುವ ಶಬ್ದಗಳ ಧ್ವನಿಯು ಮೂರು ಲೋಕವನ್ನು ತುಂಬಿತ್ತು ಮತ್ತು ಆ ಯಜ್ಞ ಮಂಟಪವು ಹೋಮದ ಹೊಗೆಯಿಂದಲೂ ಋಗ್ವೇದ, ಯಜುರ್ವೇದ, ಸಾಮವೇದವಾಕ್ಯಗಳ ನಿರ್ಘೋಷದಿಂದಲೂ, ಅತ್ಯಂತ ಶೋಭಿತವಾಗಿ ಸ್ವರ್ಗದಂತೆ ಭಾಸವಾಗುತ್ತಿತ್ತು. ಎಲೈ ವಿಪ್ರರೇ, ಈ ಪ್ರಕಾರ ಅತ್ಯಂತ ಸಮಾರಂಭದಿಂದ ನಡೆದಂಥ ಯಜ್ಞದ ಅಗ್ನಿಕುಂಡದೊಳಗಿಂದ ಅಪ್ರತಿಮ ರೂಪವತಿಯಾದ ಕನ್ನಿಕೆಯು ದಿವ್ಯಾಭರಣಭೂಷಿತಳಾಗಿಯೂ, ದಿವ್ಯ ಚಂದನಧಾರಿಯಾಗಿಯೂ ದಿವ್ಯವಸ್ತ್ರಗಳನ್ನು ಧರಿಸಿದವಳಾಗಿಯೂ ಹುಟ್ಟಿದಳು. ಆಕೆಯು ರತ್ನಕುಂಡಲಗಳನ್ನು ಧರಿಸಿದ್ದಳು. ಶ್ರೀ ಲಕ್ಷ್ಮಿಯಂತೆ ವಿಸ್ತಾರವಾದ ನೇತ್ರವುಳ್ಳವಳಾಗಿ ಗಂಗೆ ಗೌರಿಯರಿಗೆ ಸಮವಾದ ರೂಪವತಿಯಾಗಿದ್ದಳು. ಪೂರ್ವದಲ್ಲಿ ಪರಮಾತ್ಮನಿಂದ ವರಪಡೆದ ದೇವಮಾತೆಯಾದ ಅದಿತಿಯೇ ಈ ಅಗ್ನಿಕುಂಡದೊಳಗಿಂದ ಅಯೋನಿಜಳಾಗಿ ಜನಿಸಿ



ಶ್ರೀ ರೇಣುಕರಾಜನು ಪುತ್ರಕಾಮೇಷ್ಟಿ ಯಜ್ಞವನ್ನು ಸಪ್ತ ಋಷಿಗಳ ಸಮ್ಮುಖದಲ್ಲಿ ಮಾಡುವದು

ದಳು. ಆಗ ಆ ದೇವಿಯ ದಿವ್ಯಮೂರ್ತಿಯನ್ನು ನೋಡಿ, ಅತ್ಯಂತ ಆನಂದಭರಿತರಾಗಿ ಸುರರೂ, ಮುನಿಗಳೂ, ಚಾರಣರೂ, ಸರ್ವರೂ ಆಕೆಯ ಮಸ್ತಕದ ಮೇಲೆ ಸದ್ಗಂಧಯುಕ್ತವಾದ ಪುಷ್ಪಗಳ ಮಳೆ ಸುರಿಸಿದರು. ದಶದಿಕ್ಕು ಭರಿತವಾಗುವಂತೆ ದೇವದುಂದುಭಿಗಳು ಮೊಳಗಿದವು. ಮೃದಂಗ, ಪಣಕ, ವೀಣಾ, ವೇಣುಕ ಮೊದಲಾದವುಗಳ ಮನೋಹರವಾದ ಮಂಜುಲಧ್ವನಿಯು ಸರ್ವಪ್ರಾಣಿಗಳನ್ನು ಆನಂದ ದೊಳಗೆ ಮುಳುಗಿಸಿತು. ಸುರರೂ, ಸಿದ್ಧರೂ, ಮುನೀಶ್ವರರೂ, ಸರ್ವರೂ ಈಕೆಯು ಏಕವೀರಾದೇವಿಯು ಪ್ರಖ್ಯಾತಳಾದ ಜಗಜ್ಜನನಿಯು, ಗಂಗಾ ಗೌರೀ ಸ್ವರೂಪಳು ಎಂದು ಅತ್ಯಾನಂದದಿಂದ ಕೊಂಡಾಡಿದರು. ಆ ಮೇಲೆ ಋಷಿಗಳಿಂದಲೂ, ಸುರ, ಗಂಧರ್ವ, ಮುನಿಗಳಿಂದಲೂ ವಂದನೆ ಮಾಡಿಸಿಕೊಳ್ಳಲಿಕ್ಕೆ ಯೋಗ್ಯಳಾದ ರೇಣುಕಾದೇವಿಯನ್ನು, ರೇಣುಕ ರಾಜನು ಪರಮಾನಂದದಿಂದ ನಮಸ್ಕರಿಸಿ, ಆಲಂಗಿಸಿ, ವಿಧಿಪೂರ್ವಕ ಪೂಜಿಸಿ, ವಸ್ತ್ರಾಭರಣ ಗಂಧಮಾಲ್ಯಾನುಲೇಪನಗಳಿಂದ ಭಕ್ತಿಪೂರ್ವಕ ಸತ್ಕರಿಸಿದನು. ಅನಂತರ ದೇವಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಿ, ರತ್ನಧನಕನಕವಸ್ತ್ರಾದಿಗಳಿಂದ ಸಂತೋಷಪಡಿಸಿದನು. ಈ ಪ್ರಕಾರ ಏಕವೀರಾದೇವಿಯು ಸರ್ವಲಕ್ಷಣಸಂಪನ್ನಳಾಗಿ, ರೇಣುಕರಾಜನ ಯಜ್ಞ ದಲ್ಲಿ ಅಗ್ನಿಕುಂಡದಿಂದ ಅಯೋನಿಜಳಾಗಿ ಉದ್ಭವಿಸಿದಳು. ಈ ದೇವಿಯ ಪ್ರಭಾವವನ್ನು ಪೂರ್ಣವಾಗಿ ವರ್ಣಿಸುವದು ಆರು ಮುಖಗಳುಳ್ಳ ನನ್ನಿಂದಲೂ, ಬ್ರಹ್ಮಾದಿ ದೇವತೆಗಳಿಂದಲೂ ಆಗದು. ಈಕೆಯ ದರ್ಶನ ಮಾತ್ರದಿಂದ ಮತ್ತು ಭಕ್ತಿಯಿಂದ ಈಕೆಯ ಮಹಾತ್ಮೆಯನ್ನು ಕೇಳುವದ ರಿಂದ ಪಾಪರಹಿತರಾಗಿ ಪುರುಷರೂ, ಸ್ತ್ರೀಯರೂ ಸರ್ವಾಂಛಿತ ಫಲ ಗಳನ್ನು ನಿಜವಾಗಿ ಪಡೆಯುವರು. ಹೀಗೆ ರೇಣುಕರಾಜನ ಯಜ್ಞವು ಮುಗಿದ ಮೇಲೆ ಸರ್ವರೂ ರೇಣುಕಾದೇವಿಗೆ ನಮಸ್ಕರಿಸಿ, ಹರುಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

---

# ೫ನೇ ಅಧ್ಯಾಯ

**ಸ್ಕಂದ**:— ಎಲೈ ಮುನಿಗಳೇ, ಗಂಗೆ ಗೌರಿಯರ ಸ್ವರೂಪಳಾದ ದೇವತೆಗಳ ಜನನಿಯಾದ ಅದಿತಿಯು ಮೇಲೆ ಹೇಳಿದ ಪ್ರಕಾರ ಪರಮಾತ್ಮನಿಂದ ವರ ಪಡೆದು ರೇಣುಕರಾಜನ ಗೃಹದಲ್ಲಿ ರೇಣುಕಾ (ಏಕವೀರಾ) ನಾಮದಿಂದ ಅಗ್ನಿಕುಂಡದಿಂದ ಅಯೋನಿಜಳಾಗಿ ಜನನಹೊಂದಿದಳು. ಈಕೆಯ ಪ್ರಭಾವವು ವರ್ಣಿಸಲಶಕ್ಯವಾದದ್ದು.

**ಋಷಿಗಳು**:—ಷಣ್ಮುಖಸ್ವಾಮಿಯೇ, ದೇವಕಾರ್ಯಕ್ಕೋಸ್ಕರ ದೇವತೆಗಳ ತಾಯಿಯಾದ ಅದಿತಿಯು ರೇಣುಕರಾಜನ ಗೃಹದಲ್ಲಿ ರೇಣುಕಾ ಎಂಬ ಹೆಸರಿನಿಂದ ಅಗ್ನಿಕುಂಡದಿಂದ ಅಯೋನಿಜಳಾಗಿ ಜನಿಸಿದ್ದನ್ನು ನಾವು ನಿಮ್ಮಿಂದ ಕೇಳಿ ತಿಳಿದುಕೊಂಡೆವು. ಆದರೆ ಜಮದಗ್ನಿಯು ಕಸ್ಯಪಾನ್ವಯ ದಲ್ಲಿ ಹೇಗೆ ಜನಿಸಿದನೆಂಬುದನ್ನು ಸವಿಸ್ತಾರವಾಗಿ ತಿಳಿಸುವ ಕೃಪೆಯಾಗ ಬೇಕು.

**ಸ್ಕಂದ**:—ಮುನಿಗಳೇ ಸಾವಧಾನದಿಂದ ಕೇಳಿರಿ. ವರುಣನಿಗೆ ಭೃಗು ಎಂಬ ಹೆಸರಿನ ಮಗನಿಪ್ಪನು. ಅವನಿಗೆ ಪೌಲೋಮಿ ಎಂಬ ಹೆಂಡತಿಯಿದ್ದಳು. ಆಕೆಯ ಉದರಲ್ಲಿ ಚವನಭಾರ್ಗವನೆಂಬ ಸುತನು ಉದಯಿಸಿದನು. ಆ ಭೃಗುವಿನಿಂದ ಅಗ್ನಿಯು ಸರ್ವಭಕ್ಷಕನಾಗೆಂದು ಶಪಿಸಲ್ಪಟ್ಟನು. ಪುನಃ ಅವನಿಂದಲೇ ಪವಿತ್ರನಾಗುವಂಥವನಾದನು.

**ಮುನಿಗಳು**:—ಎಲೈ ಷಣ್ಮುಖನೇ, ಸರ್ವ ದೇವಮಯನಾದ ಅಗ್ನಿಯು, ಭೃಗುಮುನಿಯಿಂದ ಏನು ಕಾರಣ ಶಾಪಹೊಂದಿದನೆಂಬುದನ್ನು ವಿಸ್ತಾರ ವಾಗಿ ನಮಗೆ ಹೇಳಬೇಕು.

**ಸ್ಕಂದ**:—ಮುನಿಗಳೇ, ಭೃಗುಮುನಿಯ ಪತ್ನಿಯಾದ ಪೌಲೋಮಿ ಎಂಬ ವಳು ಅತ್ಯಂತ ಸುಂದರಿಯಿದ್ದಳು. ಆಕೆಯ ಸೌಂದರ್ಯಕ್ಕೆ ಮೋಹಿಸಿ, ತಾಲಜಂಘನೆಂಬ ಮಹಾದೈತ್ಯನು, ಭೃಗುಮುನಿಯು ಇಲ್ಲದ ಕಾಲದಲ್ಲಿ ಅವನ ಆಶ್ರಮಕ್ಕೆ ಹೋಗಿ, ಅಲ್ಲಿದ್ದ ಅಗ್ನಿಯನ್ನು ನೋಡಿ, ಎಲೈ ಅಗ್ನಿಯೇ ಈ ಕಮಲಮುಖಿಯಾದ ಸ್ತ್ರೀ ಯಾರು, ಇವಳ ಪತಿ ಯಾರು, ಸತ್ಯವನ್ನು ಹೇಳಬೇಕೆನ್ನಲು—



ಶ್ರೀ ಭೃಗುಮಹರ್ಷಿ, ಋಷಿಪತ್ನಿ ಮತ್ತು ಪುತ್ರನಾದ ಚವನಭಾರ್ಗವ ಋಷಿ



ಋಚೀಕ ಋಷಿ

**ಅಗ್ನಿ:**—ಹೇ ದಾನವನೇ, , ಇವಳು ಭೃಗುಋಷಿಯ ಪತ್ನಿಯು ಮಹಾ ಪತಿವ್ರತೆಯು, ಪತಿಭಕ್ತಿ ಪರಾಯಣಳು ಭೃಗುಮುನಿಯು ಸ್ನಾನಜಪಾದಿ ಗಳಿಗೋಸ್ಕರ ನದಿಗೆ ಹೋಗಿರುವನು. ಕ್ಷಣಾರ್ಧದೊಳಗೆ ತಿರುಗಿ ತನ್ನ ಪುಣ್ಯಾಶ್ರಮಕ್ಕೆ ಬರುವನು, ಎಂದು ಆ ನೀಚ ದಾನವನ ಮುಂದೆ ಸುಳ್ಳು ಹೇಳಿದರೆ ಪಾಪ ಬರುವದೆಂದು ತಿಳಿದು ಸತ್ಯವನ್ನೇ ಹೇಳಿದನು. ಆಗ ಅಗ್ನಿವಚನವನ್ನು ಕೇಳಿ, ತಾಲಜಂಘನೆಂಬ ದೈತ್ಯನು ಭೃಗುರೂಪದಿಂದ ಒಳಗೆ ಹೋಗಿ, ಒಬ್ಬಳೇ ಇದ್ದ ಮಹಾಪತಿವ್ರತೆಯಾದ ಪೌಲೋಮಿ ಯನ್ನು ಹೊತ್ತುಕೊಂಡು ಆಕಾಶಮಾರ್ಗದಿಂದ ನಡೆದನು. ಆಗ ಮಹಾ ಸಾಧ್ವಿಯಾದ ಪೌಲೋಮಿಯು ಭಯಭೀತಳಾಗಿ, ಮೊದಲಿಗೇ ಗರ್ಭವತಿ ಇದ್ದದರಿಂದ ಗರ್ಭವು ಪಾತವು ಆಯಿತು. ದೈತ್ಯನನ್ನು ಶಾಪದಿಂದ ಭಸ್ಮಮಾಡಿ ಆಕೆಯು ಪ್ರಾಣವನ್ನು ತ್ಯಾಗಮಾಡಿದಳು. ಆ ಮೇಲೆ ಗಂಗಾಸ್ನಾನಕ್ಕೆ ಹೋದ ಭೃಗುಮುನಿಯು ಸ್ನಾನಪೂಜಾದಿಗಳನ್ನು ತೀರಿಸಿಕೊಂಡು ಮರಳಿ ತನ್ನ ಪುಣ್ಯಾಶ್ರಮಕ್ಕೆ ಬಂದು ನೋಡುವಷ್ಟರಲ್ಲಿ ತನ್ನ ಪ್ರಿಯಪತ್ನಿಯು ಭೂಮಿಯಲ್ಲಿ ಮೃತಳಾಗಿ ಬಿದ್ದದ್ದನ್ನೂ ಮತ್ತು ಅತಿ ಮನೋಹರವಾದ ಕೂಸು ಭೂಮಿಯಲ್ಲಿ ಬಿದ್ದು ಅಳುತ್ತಿರುವದನ್ನೂ ಕಂಡು ದುಃಖಾಕ್ರಾಂತನಾಗಿ ಕೋಪದಿಂದ ಅಲ್ಲಿದ್ದ ಅಗ್ನಿಯನ್ನು ಕುರಿತು ಹೀಗೆ ಅಂದನು:

**ಭೃಗು:**—ಎಲೇ ಸುರಶ್ರೇಷ್ಠನಾದ ಅಗ್ನಿಯೇ, ನೀನು ಇಲ್ಲಿ ಇರುತ್ತಿರಲಾಗಿ ಯಾವ ನೀಚನು ಇಲ್ಲಿ ಬಂದು ಇಂಥ ನೀಚಕೃತ್ಯವನ್ನು ಮಾಡಿದನು, ಸತ್ಯವಾಗಿ ಹೇಳು, ಇಲ್ಲದಿದ್ದರೆ ನಿನಗೆ ಈಗಲೇ ಶಾಪಕೊಡುವೆನು ಅನ್ನಲು, ಅಂಜಿ ನಡುಗುತ್ತ ಅಗ್ನಿಯು ಮಹಾಮುನಿಯೇ, ಯಾವನೋ ದೈತ್ಯನು ತಾವು ಇಲ್ಲದ ವೇಳೆಯಲ್ಲಿ ಬಂದು, ಈ ಸ್ತ್ರೀಯಳು ಯಾರು, ಇವಳ ಪತಿ ಯಾರು, ಎಲ್ಲಿರುವನು ಎಂದು ಕೇಳಿದನು. ಸುಳ್ಳು ಹೇಳಿದರೆ ಪಾಪ ಬಂದೀತೆಂದು ನಾನು ಸತ್ಯವಿದ್ದದ್ದನ್ನೇ ಅವನಿಗೆ ಹೇಳಿದೆನು. ನನ್ನ ಕಡೆಗೆ ಏನೂ ಅಪರಾಧವಿಲ್ಲೆಂಬ ಅಗ್ನಿಯ ವಚನವನ್ನು ಕೇಳಿ ಭೃಗುಮುನಿಯು ಅತ್ಯಂತ ಕೋಪದಿಂದ ಎಲೈ ಅಗ್ನಿಯೇ ನಿನಗೆ ದುಷ್ಟಶಿಷ್ಟಕಾರ್ಯಗಳ ವಿಚಾರವಿಲ್ಲದ್ದರಿಂದ ಉಚ-ನೀಚ-ಸರ್ವಪದಾರ್ಥಗಳ ಭಕ್ಷಕನಾಗೆಂದು ಶಾಪಕೊಟ್ಟನು. ಆವಾಗ ಬ್ರಹ್ಮಾದಿ ಸರ್ವದೇವತೆಗಳೂ, ತತ್ವವಿದರಾದ

ಮುನಿಗಳೂ, ಋಷಿಗಳೂ ಬಂದು ಅಗ್ನಿಯನ್ನು ಉದ್ಧಾರ ಮಾಡಬೇಕೆಂದು ವಿನಯದಿಂದ ಪ್ರಾರ್ಥಿಸಲಾಗಿ ಪುನಃ ಶುದ್ಧನನ್ನಾಗಿ ಮಾಡಿದನು. ಮತ್ತು ಭೂಮಿಯಲ್ಲಿ ಬಿದ್ದಂಥ ಪೌಲೋಮಿಯನ್ನು ಕಮಂಡಲೋದಕಸೇಚನ ದಿಂದ ಎಬ್ಬಿಸಿ ಪುತ್ರನನ್ನು ಗ್ರಹಣಮಾಡಿದನು. ಹೇ ಋಷಿಗಳೇ ಈ ಪ್ರಕಾರ ಸರ್ವದೇವಮಯನಾದ ಅಗ್ನಿಯು ಭೃಗುಮುನಿಯಿಂದ ಶಪಿಸಲ್ಪಟ್ಟ ಸಂಗತಿಯು, ಭೃಗುಮುನಿಯ ಪತ್ನಿಯಾದ ಪೌಲೋಮಿ ಗರ್ಭದಿಂದ ಚ್ಯುತನಾದ ಬಾಲಕನು ಗುರುಭಕ್ತಿಪರಾಯಣನಾಗಿ ಚ್ಯವನ ಭಾರ್ಗವನೆಂಬ ಹೆಸರಿನಿಂದ ಪ್ರಸಿದ್ಧನಾದನು. ಆ ಚ್ಯವನಭಾರ್ಗವನಿಗೆ ಸ್ವತಃ ಪಿತಾಮಹನೇ ಬ್ರಹ್ಮನ ವರದಿಂದ ಋಚಿಕನೆಂಬ ಹೆಸರಿನಿಂದ ಸುತನಾಗಿ ಜನಿಸಿದನು.

---

# ೬ನೇ ಅಧ್ಯಾಯ

**ಸ್ಕಂದ**:—ಮುನಿಗಳೇ, ಇಕ್ಷ್ವಾಕು ಎಂಬ ಹೆಸರಿನ ಪ್ರಖ್ಯಾತನಾದ ಅರಸ ನಿದ್ದನು. ಅವನಿಗೆ ಶಂಭುವಿನ ಕೃಪೆಯಿಂದ ಭೀಮನೆಂಬ ಮಗನು ಹುಟ್ಟಿದನು. ಆ ಪ್ರಸಿದ್ಧನಾದ ಭೀಮನಿಗೆ ಕಾಂಚನನೆಂಬ ಹೆಸರಿನ ಮಗ ನುದಿಸಿದನು. ಅವನಿಗೆ ಸುಹೋತ್ರನೆಂಬ ಸತ್ಪುತ್ರನು ಜನಿಸಿದನು. ಸುಹೋತ್ರನಿಗೆ ಕೇಶಿನಿ ಎಂಬ ಪತ್ನಿಯಲ್ಲಿ ಜನ್ಹು ಎಂಬ ಮಗನು ಹುಟ್ಟಿದನು. ಆ ಜನ್ಹುವಿನ ಯಜ್ಞಮಂಟಪವನ್ನು ಗಂಗೆಯು ಪ್ರವೇಶಿಸಿ ಯಜ್ಞಸಾಮಗ್ರಿಗಳನ್ನು ಕೆಡಿಸಲು, ಅವನು ಕ್ರೋಧದಿಂದ ಹೇ ಗಂಗೆಯೇ, ನೀನು ಗರ್ವದಿಂದ ನನ್ನ ಯಜ್ಞವನ್ನು ಕೆಡಿಸಿದಿ, ನಿನಗೆ ತಕ್ಕ ಶಾಸನವನ್ನು ಮಾಡುವೆನೆಂದು ಆ ಗಂಗೆಯನ್ನು ಕುಡಿದುಬಿಟ್ಟನು. ಆಗ ದೇವಋಷಿ ಗಳೆಲ್ಲರು ಪರಮಾಶ್ಚರ್ಯಪಟ್ಟು ಬೇಡಿಕೊಳ್ಳಲು ಪುನಃ ಗಂಗೆಯನ್ನು ಬಿಡುವಂಥವನಾದನು. ಈ ಜನ್ಹುವಿಗೆ ಕಾವೇರಿ ಎಂಬ ಹೆಂಡತಿಯಲ್ಲಿ ಸುಹೋತ್ರನೆಂಬ ಧಾರ್ಮಿಕ ಪುತ್ರನು ಹುಟ್ಟಿದನು. ಸುಹೋತ್ರನಿಗೆ ಅಜಕನೆಂಬ ಮಗನು ಜನಿಸಿದನು. ಅಜಕನಿಗೆ ಬಲಾಕಾಶ್ವನೆಂಬ ಸುತನುದಯಿಸಿದನು. ಬಲಾಕಾಶ್ವನಿಗೆ ಕುಶನೆಂಬ ಮಗನು ಹುಟ್ಟಿದನು.

ಆ ಕುಶನಿಗೆ ಕುಶಾಂಬ, ಕುಶನಾಭ, ಶೃಂಗಾಮರಸನ, ವಸು ಎಂಬ ನಾಲ್ಕು ಮಂದಿ ಮಕ್ಕಳು ಹುಟ್ಟಿದರು. ಕುಶಾಂಬನು ಪೂರ್ಣ ಸಾವಿರ ವರ್ಷದಲ್ಲಿ ಪುತ್ರಾರ್ಥಿಯಾಗಿ ಇಂದ್ರನನ್ನು ಕುರಿತು ತಪಸ್ಸುಮಾಡಿದನು. ಆತನ ಘೋರ ತಪಸ್ಸಿಗೆ ಮೆಚ್ಚಿ ಇಂದ್ರನು ಪ್ರತ್ಯಕ್ಷನಾಗಿ ವರವನ್ನು ಕೊಟ್ಟು ತಾನೇ ಅವನಿಗೆ ಮಗನಾಗಿ ಹುಟ್ಟಿದನು. ಆ ಪಾಪರಹಿತನಾದ ಪುತ್ರನಿಗೆ ಕುಶಾಂಬನು ಗಾಧಿ ಎಂಬ ಹೆಸರಿಟ್ಟನು. ಆ ಮಹಾತ್ಮನಾದ ಗಾಧಿಗೆ ಪೌರುಕುತ್ಸಾ ಎಂಬ ಹೆಂಡತಿಯಲ್ಲಿ ಸದ್ಗುಣಿಯಾದ ಸತ್ಯವತಿ ಎಂಬ ಮಗಳು ಹುಟ್ಟಿದಳು. ಅವಳನ್ನು ಆಕೆಯ ಪಿತನಾದ ಗಾಧಿಯು ಭೃಗುಪುತ್ರನಾದ ಋಚಿಕ ಎಂಬವನಿಗೆ ಕೊಟ್ಟನು. ಆ ಋಚಿಕನ ಪತ್ನಿಯಾದ ಸತ್ಯವತಿಯು ಅತ್ಯಂತ ಭಕ್ತಿಯಿಂದ ಪತಿಸೇವೆಯನ್ನು ಮಾಡಿ ಆತನನ್ನು ತೃಪ್ತಿಪಡಿಸಿ, ಹೇ ಸ್ವಾಮಿಯೇ, ನನ್ನ ತಾಯಿಗೆ ಗಂಡು ಮಕ್ಕಳಿಲ್ಲ. ಆಕೆಗೆ ಓರ್ವ ಪುತ್ರನನ್ನು ದಯಪಾಲಿಸಬೇಕು ಮತ್ತು ನನಗೂ ಸುಶೀಲನಾದ ಪುತ್ರನನ್ನು ದಯಪಾಲಿಸಬೇಕೆಂದು ಬೇಡಿಕೊಂಡಳು. ಋಚಿಕನು ಹೆಂಡತಿಯ ಪ್ರಾರ್ಥನೆಗೆ ಒಡಂಬಟ್ಟು ಇಬ್ಬರ ಸಲುವಾಗಿ ಎರಡು ಪ್ರಕಾರದ ಮಂತ್ರಾನ್ನವನ್ನು ತಯಾರಿಸಿ, ಸತ್ಯವತಿಯನ್ನು ಕರೆದು ಎಲೈ ಪ್ರಿಯ ಪತ್ನಿಯೇ, ಈ ಮಂತ್ರಾನ್ನವನ್ನು ನಿನ್ನ ತಾಯಿಯು ಭುಂಜಿಸತಕ್ಕದ್ದು. ಇದರಿಂದ ಅವಳಲ್ಲಿ ಕ್ಷತ್ರಿಯರೊಳಗೆ ಶ್ರೇಷ್ಠನಾದಂಥ ಅಜೇಯನಾದ ಪುತ್ರನು ಜನಿಸುವನು. ಈ ಮಂತ್ರಾನ್ನವನ್ನು ನೀನು ಭುಂಜಿಸತಕ್ಕದ್ದು. ಇದರಿಂದ ನಿನ್ನಲ್ಲಿ ಶಮಾದಿಗುಣಯುಕ್ತನಾದಂಥ, ಸ್ಥಿರಮತಿಯಾದಂಥ, ತಪೋಧನನಾದ ದ್ವಿಜಶ್ರೇಷ್ಠನಾದ ನಂದನನು ಜನಿಸುವನು ಎಂದು ಹೇಳಿ, ಭೃಗುನಂದನನಾದ ಋಚಿಕನು ಗೋದಾವರಿ ತಟದಲ್ಲಿ ತಪಸ್ಸಿನಲ್ಲಿ ತೊಡಗುವಂಥವನಾದನು.

---

# ೭ನೇ ಅಧ್ಯಾಯ

ಸ್ಕಂದ:—ಋಷಿಗಳೇ, ಗಾಧಿರಾಜನು ತೀರ್ಥಯಾತ್ರೆಗೋಸುಗ ಪತ್ನಿಯನ್ನು ಕೂಡಿಕೊಂಡು ಹೊರಟು ಮಗಳನ್ನು ನೋಡಲಿಕ್ಕೆ ಅಳಿಯನಾದ ಋಚಿಕನ ಆಶ್ರಮಕ್ಕೆ ಬಂದನು. ಆಗ ಋಚಿಕನ ಸತಿಯಾದ ಸತ್ಯವತಿಯು ತಾಯಿತಂದೆಗಳನ್ನು ನೋಡಿ ಆನಂದಪಟ್ಟು, ತನ್ನ ಪತಿಯು ತನಗೋಸುಗ ಮತ್ತು ತನ್ನ ತಾಯಿಗೋಸುಗ ಪುತ್ರಸಂತಾನವಾಗುವದಕ್ಕೆ ತಯಾರಿಸಿ ಕೊಟ್ಟ ಎರಡು ಪ್ರಕಾರದ ಮಂತ್ರಾನ್ನಗಳನ್ನು ತಾಯಿಯ ಕೈಯಲ್ಲಿ ಹರುಷದಿಂದ ಕೊಟ್ಟು ಆದ ಸಂಗತಿಯನ್ನೆಲ್ಲ ಆಕೆಗೆ ತಿಳಿಸಿದಳು. ಆ ಮೇಲೆ ತಾಯಿಮಕ್ಕಳೀರ್ವರು ಪರಮಾನಂದದಿಂದ ಸ್ನಾನಪೂಜಾದಿಗಳನ್ನು ತೀರಿಸಿಕೊಂಡು ಮಂತ್ರಾನ್ನಗಳನ್ನು ಸೇವಿಸಲಿಕ್ಕೆ ಕೂತಾಗ ದೈವಗತಿಯಿಂದ ತಾಯಿಯು ತನಗೋಸುಗವಿದ್ದ ಮಂತ್ರಾನ್ನವನ್ನು ಮರೆತು ಮಗಳಿಗೆ ಕೊಟ್ಟಳು. ಮಗಳಿಗೋಸುಗವಿದ್ದದನ್ನು ತಾನು ಸೇವಿಸಿದಳು. ಆಗ ಮಂತ್ರಾನ್ನಗಳನ್ನು ಸೇವಿಸಿದ್ದರಿಂದ ಇಬ್ಬರೂ ಗರ್ಭಧಾರಣವನ್ನು ಮಾಡಿದರು. ಇಬ್ಬರಿಗೂ ಬಯಕೆಗಳು ತೋರಲಾರಂಭಿಸಿದವು. ಸತ್ಯವತಿಯ ಗರ್ಭದಲ್ಲಿ ಕ್ಷತ್ರಿಯ ಪಿಂಡವು ಮೊಳೆತದ್ದರಿಂದ, ಯುದ್ಧ ಸಮ್ಮಂಧ ಕಥೆಗಳನ್ನು ಕೇಳಬೇಕೆಂಬ ಮತ್ತು ಯುದ್ಧವನ್ನು ನೋಡಬೇಕೆಂಬ ಇಚ್ಛೆಯು ಅವಳಿಗೆ ಆಗಹತ್ತಿತು. ಅವಳ ತಾಯಿಯ ಗರ್ಭದಲ್ಲಿ ಬ್ರಹ್ಮಪಿಂಡವು ಮೊಳೆತದ್ದರಿಂದ ಸದ್ಭಕ್ತರ ಕಥೆಗಳನ್ನು ಕೇಳುವ ಮತ್ತು ಸತ್ಕರ್ಮಗಳನ್ನು ಆಚರಿಸುವ ಇಚ್ಛೆಯು ಆಗಹತ್ತಿತು. ಹೀಗೆ ತನ್ನ ಹೆಂಡತಿಯಲ್ಲಿ ವಿಪರೀತ ಇಚ್ಛೆ ಹುಟ್ಟುವದನ್ನು ನೋಡಿ, ಯೋಗಸಿದ್ಧನಾದ ಋಚಿಕನು ದಿವ್ಯದೃಷ್ಟಿಯಿಂದ ವಿಚಾರಿಸಿ ತನ್ನ ಹೆಂಡತಿಗೆ ಕೊಟ್ಟ ಮಂತ್ರಾನ್ನವು ಬದಲಿಸಿ ಆಕೆಯ ತಾಯಿಗೆ ಹೋಗಿದೆ ಎಂದು ತಿಳಿದುಕೊಂಡು ಎಲ್ಲೈ ಪ್ರಿಯೇ, ನಾನು ನಿನ್ನ ಸಲುವಾಗಿ ತಯಾರಿಸಿದ ಮಂತ್ರಾನ್ನವನ್ನು ನಿನ್ನ ತಾಯಿಯು ಮೋಸದಿಂದ ತಾನು ಸೇವಿಸಿ ತನ್ನದನ್ನು ನಿನಗೆ ಕೊಟ್ಟಿದ್ದಾಳೆ. ಆ ಕಾರಣ ನಿನ್ನ ಗರ್ಭದಲ್ಲಿ ಕ್ಷತ್ರಿಯರ ಕ್ರೂರ ಸ್ವಭಾವವುಳ್ಳ ಮಗನು ಜನಿಸುವನು. ನಿನ್ನ ತಾಯಿಯ ಗರ್ಭದಲ್ಲಿ ಶಾಂತ್ಯಾದಿ ಸದ್ಗುಣಗಳಿಂದ ಯುಕ್ತನಾದ ಬ್ರಹ್ಮತೇಜಸ್ಸಿನ ಪುತ್ರನು

ಜನಿಸುವನು ಎಂದು ಹೇಳಿದನು. ಆಕೆಯು ದುಃಖದಿಂದ ಸ್ವಾಮಿ, ನನಗೆ ಕ್ರೂರ ಸ್ವಭಾವವುಳ್ಳ ಮಗನು ಜನಿಸಬಾರದು. ಶಾಂತಿದಾಂತಿ ಮೊದಲಾದ ಸದ್ಗುಣವುಳ್ಳ ಪುತ್ರನೇ ಜನಿಸುವಂತೆ ಮಾಡಬೇಕೆಂದು ಬೇಡಿ ಕೊಂಡಳು. ಆಗ ಋಚಿಕನು ಎಲೈ ಪ್ರಿಯೇ, ನನ್ನ ನಿನ್ನ ಇಚ್ಛೆಯ ವಿರುದ್ಧ ಕರ್ಮಾನುಸಾರದಿಂದ ಆದ ಮಾತಿಗೆ ಉಪಾಯವಿಲ್ಲ, ಶಾಂತ ಳಾಗು ಎಂದು ಪರಿಪರಿಯಿಂದ ಹೇಳಿದರೂ ಕೇಳದೆ ಸ್ವಾಮಿ, ಪ್ರತಿ ಸೃಷ್ಟಿಯನ್ನು ಉತ್ಪನ್ನಮಾಡತಕ್ಕಂಥ ತಮಗೆ, ಸದ್ಗುಣದಿಂದ ಶೋಭಿಸುವ ಒಬ್ಬ ಸುತನನ್ನು ಕೊಡುವದು ಅಸಾಧ್ಯವೇ? ನನಗೆ ಶಾಂತಿದಾಂತ್ಯಾದಿ ಗುಣಗಳಿಂದ ಯುಕ್ತನಾದ ಪುತ್ರನನ್ನು ಕೊಡಲಿಕ್ಕೆ ನೀವು ಉದಾಸೀನ ಮಾಡಿದರೆ ನಾನು ದೇಹವನ್ನೇ ತ್ಯಾಗಮಾಡುವದು ನಿಶ್ಚಯವು ಎಂದು ನುಡಿದ ಸತಿಯ ಮಾತಿಗೆ ಮಹಾಕರುಣಿಯಾದ ಋಚಿಕನು ಕನಿಕರಪಟ್ಟು, ಹೇ ಪ್ರಿಯಳೇ, ಏನೂ ಚಿಂತೆಮಾಡಬೇಡ, ನಿನ್ನ ಮನಸ್ಸಿನಲ್ಲಿದ್ದಂತೆ ಗುಣ ವುಳ್ಳ ಪುತ್ರನು ಜನಿಸುವನು ಎಂದು ಹೇಳಿ, ತನ್ನ ಯೋಗಸಾಮರ್ಥ್ಯ ದಿಂದ ಪಿಂಡದೊಳಗಿದ್ದ ಗುಣಾಂಶವನ್ನು ಬದಲು ಮಾಡಿದನು. ಸತ್ಯ ವತಿಯು ಪರಮಾನಂದದಿಂದ ಬ್ರಹ್ಮತೇಜಸ್ಸಿನಿಂದ ರಾಜಿಸುವ ಸುಪುತ್ರ ನನ್ನು ಹಡೆದಳು. ಅವನು ಸಕಲವಿದ್ಯಾಪಾರಂಗತನೂ, ಮಹಾತಪೋ ನಿಷ್ಠನೂ ಆದನು. ಅವನ ತಾಯಿಯಾದ ಸತ್ಯವತಿಯು ತನ್ನ ಪುಣ್ಯದ ಪ್ರಭಾವದಿಂದ ಲೋಕೋದ್ಧಾರಕವಾದ ಕೌಶೀಕಿ ಎಂಬ ಹೆಸರಿನ ನದಿ ಯಾಗಿ ಹರಿದಳು ಮತ್ತು ಸರ್ವಪ್ರಾಣಿಗಳ ಪಾಪವನ್ನು ದರ್ಶನಸ್ಪರ್ಶ ದಿಂದ ಕಳೆಯುತ್ತಾ ಮೆರೆಯುವಂಥವಳಾದಳು.



## ೮ನೇ ಅಧ್ಯಾಯ

**ಸ್ಕಂದ:**—ಎಲೈ ಪಾಪರಹಿತರಾದ ಋಷಿಗಳೇ, ಮಹಾಮಹಿಮನಾದ ಋಚಿಕನ ಸುತನಾದ ಜಮದಗ್ನಿಯು ಸ್ವಯಂವರದಲ್ಲಿ ಜಗದಂಬೆಯಾದ ರೇಣುಕಾದೇವಿಯ ಪತಿಯಾದ ಸಂಗತಿಯನ್ನೂ ಮತ್ತು ಆ ರೇಣುಕಾದೇವಿಯ ಉದರದಲ್ಲಿ ಮೂರು ಲೋಕದೊಡೆಯನಾದ ವಿಷ್ಣು ಪರಶುರಾಮನೆಂಬ ಹೆಸರಿನಿಂದ ಉದಯನಾದ ಸಂಗತಿಯನ್ನೂ ಹೇಳುತ್ತೇನೆ, ಸಾವಧಾನದಿಂದ ಕೇಳಿರಿ.

**ಋಷಿಗಳು:**—ಎಲೈ ಷಣ್ಮುಖಸ್ವಾಮಿಯೇ, ಪ್ರಖ್ಯಾತನಾದ ಜಮದಗ್ನಿಯು ಜಗಜ್ಜನನಿಯಾದ ರೇಣುಕಾದೇವಿಯನ್ನು ಸ್ವಯಂವರದೊಳಗೆ ಗ್ರಹಣ ಮಾಡಿದ ಪಾಪನಾಶಕವಾದ ಕಥೆಯನ್ನು ನಮಗೆ ಸವಿಸ್ತಾರವಾಗಿ ಹೇಳಬೇಕು.

**ಸ್ಕಂದ:**—ಗೌತಮಿಯಲ್ಲಿ ಕೋಟಿತೀರ್ಥದಲ್ಲಿ ವಿಖ್ಯಾತನಾದ ಋಚಿಕನ ಆಶ್ರಮವಿರುತ್ತದೆ. ಆ ಶುಭವಾದ ಆಶ್ರಮದಲ್ಲಿ ಋಚಿಕನು ತನ್ನ ಸುತನಾದ ಜಮದಗ್ನಿಯನ್ನು ಕೂಡಿಕೊಂಡು ತಪಸ್ಸು ಮಾಡಿದನು. ಆ ಮಹಿಮಾಶಾಲಿಯಾದ ಋಚಿಕನ ಭೀತಿಯಿಂದ ಗೋದಾವರಿ ನದಿಯು ಎರಡು ಭಾಗವಾಯಿತು. ಆ ಸ್ಥಾನದಲ್ಲಿ ನರರು ಸ್ನಾನದಾನಾದಿಗಳನ್ನು ಮಾಡಲು ಅಕ್ಷಯವಾದ ಫಲವು ಪ್ರಾಪ್ತವಾಗುವದು. ಮಹಾ ತೇಜಸ್ವಿಯಾದ ಜಮದಗ್ನಿಯು ಅನೇಕ ಮುನಿಜನರಿಂದೊಡಗೂಡಿಕೊಂಡು ಇದ್ದ ಒಂದು ಸಮಯದಲ್ಲಿ, ಅತ್ಯಂತ ಭಕ್ತಿಯಿಂದ ಕರಕಮಲವ ಮುಗಿದು ಪರಿಪರಿಯಿಂದ ಸ್ತುತಿಸಿ ಗೌತಮಿಯನ್ನು ತುಷ್ಟಿಪಡಿಸಿದರು. ಆಗ ಗೌತಮಿಯು ದಿವ್ಯರೂಪದಿಂದ ಪ್ರತ್ಯಕ್ಷಳಾಗಿ ಎಲೈ ಮುನಿಶ್ರೇಷ್ಠನೇ, ನಿನ್ನ ಸ್ತವನದಿಂದ ನಾನು ತುಷ್ಟಳಾದೆನು. ನನ್ನ ಪ್ರಸಾದದಿಂದ ನಿನ್ನ ವಾಂಛಿತಾರ್ಥವೆಲ್ಲ ಸಿದ್ಧಿಸುವದೆಂದು ಹೇಳಿ ಗೌತಮಿದೇವಿಯು ಅಲ್ಲೇ ಅಂತರ್ಧಾನವಾದಳು.

---

# ೯ನೇ ಅಧ್ಯಾಯ

**ಸ್ಕಂದ:**—ಹೇ ಋಷಿಗಳೇ, ಆ ಮಹಾ ಪ್ರತಾಪಶಾಲಿಯಾದ ಜಮದಗ್ನಿ ಮುಂದೆ ಕೆಲವುಕಾಲ ತಂದೆತಾಯಿಗಳನೂ ಗಂಗೆಯನ್ನೂ ಮುನಿಗಳನ್ನೂ ಆರಾಧಿಸಿದನು. ಆ ಮೇಲೆ ಇಂದ್ರಿಯಗಳನ್ನು ನಿಗ್ರಹಿಸಿ ವಾಯುಭಕ್ಷಣ ಮಾಡುತ್ತಾ ಘೋರ ತಪವನ್ನಾಚರಿಸತೊಡಗಿದನು. ಅವನ ತಪಸ್ಸಿನ ಪ್ರಭಾವದಿಂದ ಬ್ರಹ್ಮಲೋಕದ ಪರ್ಯಂತರ ಸಕಲ ಲೋಕಗಳು ತಾಪವನ್ನು ಹೊಂದಿದವು. ಋಷಿಗಳೂ ಮುನಿಗಳೂ ಮಹಾತ್ಮರೂ ಆಶ್ಚರ್ಯಭರಿತರಾದರು. ಹೀಗೆ ಮಹತ್ತರವಾದ ತಪವನ್ನಾಚರಿಸಿ ಮಹಾ ತೇಜಸ್ವಿಯಾದ ಜಮದಗ್ನಿಯು ಅನ್ಯರಿಗೆ ದುರ್ಲಭವಾದ ಧರ್ಮವನ್ನು ಸಂಗ್ರಹಿಸಿದನು. ಅನಂತರ ಪರಮ ತತ್ವಜ್ಞನಾದ ಜಮದಗ್ನಿ ಋಷಿಯು ಸಕಲ ಪಾಪಹಾರಕವಾದ ಭಾಗೀರಥೀ ದರ್ಶನಕ್ಕಾಗಿ ತನ್ನ ಪಿತನಾದ ಋಚಿಕ ಮುನಿಯನ್ನು ಕೂಡಿಕೊಂಡು ಗೋದಾವರಿ ತೀರದಿಂದ ಪ್ರಯಾಣ ಮಾಡಿದನು. ಆ ಪಿತಾಪುತ್ರರೀರ್ವರು ತೀರ್ಥ ಯಾತ್ರಾರ್ಥವಾಗಿ ರಮ್ಯವಾದ ಭಾಗೀರಥೀ ತೀರದಲ್ಲಿ ಬಂದಾಗ ಬುದ್ಧಿಶಾಲಿಯಾದ ರೇಣುಕರಾಜನು ಅಪ್ರತಿಮ ರೂಪವಂತರಾದ ಆ ಮುನಿಗಳನ್ನು ಕಂಡು ಅತ್ಯಂತ ಹರುಷದಿಂದ ಅವರನ್ನು ತನ್ನ ಮನೆಗೆ ಕರಕೊಂಡು ಬಂದು ಪಾದ್ಯ, ಅರ್ಘ್ಯ, ಆಚಮನಾದಿಗಳಿಂದ ಭಕ್ತಿಪೂರ್ವಕವಾಗಿ ಜಮದಗ್ನಿ ಋಚಿಕರನ್ನು ಪೂಜಿಸಿ ವಿನಯವಾಣಿಯಿಂದ ಹೀಗೆ ಕೇಳಿದನು.

**ರೇಣುಕರಾಜ:**—ಹೇ ಮುನಿಗಳೇ, ನೀವಿಬ್ಬರು ಕ್ಷೀರಸಾಗರಾಭಿಮಾನಿ ದೇವತೆಗಳೋ ಅಥವಾ ಚಂದ್ರ ಸೂರ್ಯ ದೇವತೆಗಳೋ ಅಥವಾ ಅಗ್ನಿ ವರುಣ ದೇವತೆಗಳೋ ಅಥವಾ ಹರಿಹರರೋ, ಈ ನಿಮ್ಮ ಜಗನ್ಮೋಹಕ ರೂಪವು ಆಶ್ಚರ್ಯಕಾರಕವಾಗಿದೆ. ತಾವಾರೆಂಬುದನ್ನು ತಿಳಿಸಬೇಕು

**ಜಮದಗ್ನಿ:**—ಎಲೈ ರಾಜೇಂದ್ರನೇ, ನಾವು ಭೃಗುಋಷಿಯ ವಂಶಜರು. ಪುಣ್ಯಗೋದಾವರಿ ತಟದಿಂದ ಗಂಗಾ ದರ್ಶನಾರ್ಥವಾಗಿಯೂ, ತಮ್ಮಂಥ ಮಹಾಪುರುಷರ ದರ್ಶನಾರ್ಥವಾಗಿಯೂ ಬಂದಿದ್ದೇವೆ. ಈತನು ನನ್ನ ತಂದೆಯು. ಇವನ ಹೆಸರು ಋಚಿಕನು. ಇವನು ನಿಗ್ರಹ ಅನುಗ್ರಹ

ಶಕ್ತನೂ, ಪರಮ ತತ್ವವಿದನೂ, ಚ್ಯವನಭಾರ್ಗವನ ಪುತ್ರನೂ, ಸರ್ವ ಶಾಸ್ತ್ರವಿಶಾರದನೂ ಇದ್ದಾನೆ. ಇವನ ಶಾಪಭಯದಿಂದ ಗೋದಾವರಿ ನದಿಯು ಎರಡು ಭಾಗವಾಯಿತು.

**ರೇಣುಕರಾಜ:**—ಹೇ ಪುಣ್ಯರಾದ ಮುನಿಗಳೇ, ನಿಮ್ಮ ದರ್ಶನದಿಂದ ಇಂದು ನಾನು ಧನ್ಯನಾದೆನು, ಕೃತಕೃತ್ಯನಾದೆನು. ಈ ನಿಮ್ಮ ದರ್ಶನವು ನನಗೆ ನನ್ನ ಮಹತ್ತರವಾದ ಪುಣ್ಯದಿಂದ ಲಭಿಸಿತು. ಇದರ ಲ್ಲೇನೂ ಸಂಶಯವಿಲ್ಲ. ಮಹಾತ್ಮನಾದ ಋಚಿಕ ಮುನಿಯೇ, ತಮಗೆ ನನ್ನದೊಂದು ವಿನಂತಿಯೇನಂದರೆ ಈ ನನ್ನ ಪ್ರಿಯ ಪುತ್ರಿಯಾದ ರೇಣುಕಾ ದೇವಿಯು ರೂಪದಿಂದಲೂ, ಸದ್ಗುಣಗಳಿಂದಲೂ, ಭೂಮಿಯಲ್ಲಿ ಅಪ್ರ ತಿಮಳಾಗಿದ್ದಾಳೆ. ಈಕೆಯನ್ನು ಯಾರಿಗೆ ಕೊಡಬೇಕೆಂಬುವದು ನನಗೆ ತಿಳಿಯದಂತಾಗಿದೆ. ತಾವು ದಯಮಾಡಿ ನನಗೆ ತಿಳಿಸುವಂತೆ ಮಾಡ ಬೇಕು.

**ಋಚಿಕ:**—ಹೇ ರಾಜನೇ, ಅತಿ ರೂಪವತಿ ಮತ್ತು ಗುಣವತಿಯಾದ ಕನ್ನಿಕೆಗೆ ವರನನ್ನು ನೋಡಬೇಕಾದರೆ ಸ್ವಯಂವರ ಮಾಡು. ಅಂದರೆ ರೂಪಗುಣಾದಿಗಳಿಂದ ಶೋಭಿತರಾದ ರಾಜರೂ, ರಾಜಪುತ್ರರೂ, ಋಷಿಗಳೂ, ಸರ್ವರೂ ಸ್ವಯಂವರ ನೋಡುವ ಇಚ್ಛೆಯಿಂದ ಬರುವರು. ಆಗ ಕನ್ನಿಕೆಗೆ ತನಗೆ ತಕ್ಕ ವರನನ್ನು ಆರಿಸಿಕೊಳ್ಳುವ ಸಂಧಿಯು ಲಭಿಸುತ್ತದೆ.

---

# ೧೦ನೇ ಅಧ್ಯಾಯ

**ಸ್ಕಂದ:**—ಋಷಿಗಳಿರಾ, ರೇಣುಕರಾಜನು ಆ ಋಚಿಕ ಮಹಾಮುನಿಯ ವಾಕ್ಯವನ್ನು ಸಿರಸಾವಹಿಸಿ ವಿನಯವಾಣಿಯಿಂದ ಋಷಿಗೆ ಅಂದನು.

**ರೇಣುಕ:**—ಮಹಾಮುನಿಯೇ, ನಿಮ್ಮ ವಾಕ್ಯವು ಅತ್ಯಂತ ಹಿತಕರವಾದದ್ದು, ಸತ್ಯವೂ ಇರುತ್ತದೆ. ನಾನು ನಿಶ್ಚಯವಾಗಿ ನನ್ನ ಮಗಳ ಸ್ವಯಂವರವನ್ನು ಮಾಡುವೆನು. ನಾನು ತಮ್ಮ ಪಾದಸೇವಕನು. ನಾನು ಮಾಡತಕ್ಕ ಸ್ವಯಂವರಕ್ಕೆ ತಾವು ತಮ್ಮ ತೇಜಸ್ವಿಯಾದ ಪುತ್ರನನ್ನೊಡಗೊಂಡು



ಶ್ರೀ ರೇಣುಕಾ ದೇವಿಯು ಸ್ವಯಂವರಮಾಲೆಯನ್ನು ಶ್ರೀ ಜಮದಗ್ನಿಯ
ಕಂಠದಲ್ಲಿ ಹಾಕುವದು

ಅಗತ್ಯವಾಗಿ ಬಂದು ಕಾರ್ಯಕ್ಕೆ ಶೋಭೆಯನ್ನುಂಟುಮಾಡಿ ನನ್ನನ್ನು ಉದ್ಧರಿಸಬೇಕೆಂದು ಬೇಡಿಕೊಂಡು ಗಂಧಮಾಲಾದಿಗಳಿಂದಲೂ, ವಸ್ತ್ರ ಭೂಷಣಾದಿಗಳಿಂದಲೂ ಆ ಮುನಿಗಳನ್ನು ಅಲಂಕರಿಸಿ ನಮಸ್ಕರಿಸಿ ಬೀಳ್ಕೊಟ್ಟನು. ಅನಂತರ ಅವರು ಮುನಿಗಳ ಸಮೂಹದೊಡನೆ ತಮ್ಮ ಸ್ಥಾನಕ್ಕೆ ಹೋದರು. ಇತ್ತ ರೇಣುಕರಾಜನು ಭಾಗೀರಥೀ ತೀರದಲ್ಲಿ ಸಂಭ್ರಮದಿಂದ ಮಗಳ ಸ್ವಯಂವರ ಕಾರ್ಯಕ್ಕೆ ಪ್ರಾರಂಭಿಸಿದನು. ಅವನು ತನ್ನ ಪ್ರಿಯ ಪುತ್ರಿಯಾದ ರೇಣುಕಾದೇವಿಗೆ ಮಹಾತೇಜಸ್ವಿಯಾದ ಜಮದಗ್ನಿ ಋಷಿಯೇ ಪತಿಯಾಗಬೇಕೆಂದು ಸಂಕಲ್ಪಿಸಿ ಆರಂಭ ಮಾಡಿದನು. ಭವ್ಯ ವಿವಾಹಮಂಟಪವು ಗಗನಚುಂಬಿತವಾದ ಧ್ವಜಗಳಿಂದಲೂ, ರತ್ನಗಳಿಂದಲೂ, ಅಲಂಕೃತವಾದ ಕಂಭಗಳಿಂದಲೂ ಮುತ್ತು ರತ್ನಗಳ ತೋರಣಗಳಿಂದಲೂ ಅತ್ಯಂತ ರಮಣೀಯವಾಗಿ ರಂಜಿಸಿತು. ಅಲ್ಲಲ್ಲಿಗೆ ರತ್ನಖಚಿತವಾದ ಬೊಂಬೆಗಳು ಮನೋಹರವಾಗಿ ಮೆರೆಯುತ್ತಿದ್ದವು. ಸದ್ಗಂಧಯುಕ್ತವಾದ ಷಡ್ರಸಾನ್ನವು ಅಪರಿಮಿತವಾಗಿ ತಯಾರಮಾಡಲ್ಪಡುವಂಥಾದ್ದಾಗಿತ್ತು. ಇದೇ ಪ್ರಕಾರ ಉತ್ತಮೋತ್ತಮ ಸರ್ವಸಾಮಗ್ರಿಯಿಂದೊಡಗೂಡಿ ಇಂದ್ರನ ಅರಮನೆಯನ್ನು ಸಹ ತಿರಸ್ಕರಿಸುವಂಥ ವಿವಾಹಮಂಟಪವನ್ನು ಆ ಕಾರ್ಯಗಳಲ್ಲಿ ಅತಿ ನಿಪುಣರಾದ ಕಾರಾಗೀರರಿಂದ ರೇಣುಕರಾಜನು ತಯಾರ ಮಾಡಿಸಿದ ನಂತರ ಮಹಾತರಾದ ಸರ್ವ ಮುನಿಗಳನ್ನೂ, ಸರ್ವ ರಾಜರನ್ನೂ ಕರಿಸಿಕೊಂಡು ಅತಾದರದಿಂದ ಪೂಜಿಸಿ, ಕರಕಮಲಗಳನ್ನು ಮುಗಿದು, ಎಲೈ ಸರ್ವಜ್ಞರಾದ ಋಷಿಗಳೇ, ನೃಪರೇ, ನನ್ನ ಮಗಳಾದ ರೇಣುಕಾದೇವಿಯು ರೂಪದಿಂದಲೂ ಗುಣದಿಂದಲೂ ಅಪ್ರತಿಮಳಾಗಿದ್ದಾಳೆ. ಈಕೆಯನ್ನು ಯಾರಿಗೆ ಕೊಡಬೇಕೆಂಬುವದು ನನಗೆ ತಿಳಿಯದು. ನಾನು ಏನು ಮಾಡಬೇಕೆಂಬುವದನ್ನು ತಾವು ವಿಚಾರಿಸಿ ಹೇಳಬೇಕೆಂದು ಬೇಡಿಕೊಂಡನು. ಆಗ ಸ್ವಯಂವರಕ್ಕೆ ಬಂದ ಮುನಿಗಳೂ ಅರಸರೂ ರೇಣುಕರಾಜನಿಗೆ, ಎಲೈ ಅರಸನೇ ಈಗ ಸಯಂವರಕ್ಕೆ ಬಂದಿರುವ ಎಲ್ಲ ಋಷಿಗಳೊಳಗೆ ಮತ್ತು ಜರಾರೊಳಗೆ ರೇಣುಕಾದೇವಿಯು ಯಾವನನ್ನು ಪತಿಯಾಗಿ ಆರಿಸುವಳೋ ಅವನಿಗೆ ಕೊಡಬೇಕೆಂದು ಹೇಳಿದರು. ಆಗ ರೇಣುಕರಾಜನು ಸರ್ವರ ಅನುಮತಿಯನ್ನು ಪಡಕೊಂಡು ತಾನು ಮೊದಲಿಗೇ ಮಹಾತೇಜಸ್ವಿಯಾದ ಜಮದಗ್ನಿಗೇ

ಕೊಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿದ ಪ್ರಕಾರ ಆ ಋಚಿಕ ಜಮದಗ್ನಿ ಋಷಿಗಳನ್ನು ಸ್ಮರಣೆಮಾಡಿದನು. ಕೂಡಲೇ ಸರ್ವಜ್ಞರಾದ ಋಚಿಕ ಜಮದಗ್ನಿ ಋಷಿಗಳು ಮುನಿಪರಿವಾರ ಸಹಿತ ಸ್ವಯಂವರ ಮಂಟಪವನ್ನು ಕುರಿತು ಆಗಮಿಸಿದರು. ಆಗ ಅವರನ್ನೇ ನಿರೀಕ್ಷಿಸುತ್ತಿದ್ದ ರೇಣುಕರಾಜನು ಎದುರುಹೋಗಿ ದೀರ್ಘದಂಡ ನಮಸ್ಕಾರ ಮಾಡಿ ಅವರಿಬ್ಬರನ್ನೂ ಕೈಗೊಟ್ಟು ಕರಕೊಂಡು ಬಂದು, ಉನ್ನತಾಸನಗಳಲ್ಲಿ ಕೂಡ್ರಿಸಿ, ಪರಮಹರುಷಿತನಾಗಿ, ಅರ್ಘ್ಯಪಾದ್ಯಾದಿಗಳಿಂದ ಅರ್ಚನೆ ಮಾಡಿದನು. ಆ ಮೇಲೆ ಏಕವೀರಾ ಎಂಬ ಬಿರುದಾಂಕಿತ ರೇಣುಕಾದೇವಿಯನ್ನು ಕರಿಸಿ ರೇಣುಕರಾಜನು ಸ್ವಯಂವರಕ್ಕೆ ಬಂದ ಸರ್ವ ಮುನಿಗಳನ್ನೂ ಅರಸರನ್ನೂ ತೋರಿಸಿ, ಅವಳಿಗೆ ಸರ್ವರ ಸಮಕ್ಷಮ ಹೇ ಪುತ್ರಿಯೇ, ಕೂಡಿದ ಈ ಎಲ್ಲ ಮುನಿಗಳಲ್ಲಿಯೂ ಮತ್ತು ನೃಪರಲ್ಲಿಯೂ ನಿನ್ನ ರೂಪಗುಣಕ್ಕೆ ತಕ್ಕ ಪತಿಯನ್ನು ಆರಿಸಿಕೋ ಎಂದು ಹೇಳಿದನು. ಆಗ ರೇಣುಕಾದೇವಿಯು ತಂದೆಯ ಆಜ್ಞಾನುಸಾರವಾಗಿ ನಿರೀಕ್ಷಣೆ ಮಾಡುವ ಕಾಲದಲ್ಲಿ ತನಗಿಂತ ಹಿರಿಯರನ್ನು ತಂದೆಯ ಸಮಾನರೆಂದೂ ತನಗಿಂತ ಕಿರಿಯರನ್ನು ಪುತ್ರಸಮಾನರೆಂದೂ ತನ್ನ ಸಮಾನ ವಯಸ್ಕರನ್ನು ಅಣ್ಣ ತಮ್ಮಂದಿರ ಸಮಾನರೆಂದೂ ನೋಡುತ್ತಾ ಬಂದು, ಕಡೆಗೆ ತನ್ನ ಗುಣ ರೂಪ ವಯಸ್ಸಿಗೆ ತಕ್ಕ ಮಹಾ ತೇಜಸ್ವಿಯಾದ ಜಮದಗ್ನಿ ಋಷಿಯನ್ನು ಪತಿಯಾಗಿ ಆರಿಸಿ, ತಂದೆಯ ಅನುಜ್ಞೆಯನ್ನು ಪಡೆದು ಅವನ ಕೊರಳೊಳಗೆ ರತ್ನಖಚಿತವಾದ ಪುಷ್ಪಮಾಲೆಯನ್ನು ಹಾಕಿದಳು. ಕೂಡಲೇ ಆ ಸಭಾ ಮಂಟಪವೆಲ್ಲ ಹಾಹಾಕಾರ ತುಂಬಿತು. ಎಷ್ಟೋ ರಾಜರೂ ಋಷಿಗಳೂ ತಮ್ಮ ತಮ್ಮ ಆಸನದಿಂದ ಎದ್ದು ಅತ್ಯಂತ ಕೋಪಭರಿತರಾದರು.

---

# ೧೧ನೇ ಅಧ್ಯಾಯ

**ಸ್ಕಂದ**:—ಎಲೈ ಋಷಿಗಳೇ, ರೇಣುಕಾದೇವಿಯು ಜಮದಗ್ನಿಯ ಕೊರಳಲ್ಲಿ ಮಾಲೆಯನ್ನು ಹಾಕಿದ ಕ್ಷಣವೇ ಆಕಾಶಮಾರ್ಗದಲ್ಲಿ ಸ್ವಯಂವರವನ್ನು ನೋಡಲಿಕ್ಕೆ ಕೂಡಿದ ದೇವತೆಗಳೂ, ಗಂಧರ್ವರೂ, ಕಿನ್ನರರೂ, ಕಿಂಪುರುಷರೂ ಪರಮಾನಂದಭರಿತರಾಗಿ ಪುಷ್ಪವೃಷ್ಟಿಯನ್ನು ಮಾಡಿದರು. ದೇವದುಂಭಿಗಳು ಮೊಳಗಿದವು. ಗಂಧರ್ವರು ಗಾಯನ ಮಾಡಿದರು. ಸುರಾಂಗನೆಯರು ನರ್ತನ ಮಾಡಿದರು ಮತ್ತು ಸ್ವಯಂವರಮಂಟಪ ದಲ್ಲಿಯೂ ವೀಣಾ, ಮೃದಂಗ, ಭೇರಿನಾದಗಳಿಂದ ಪೃಥ್ವಿಯೆಲ್ಲವೂ ಭರಿತ ವಾಯಿತು. ಋಷಿಗಳೂ, ದೇವತೆಗಳೂ, ವಿವೇಕಿಗಳಾದ ಅರಸರೂ, ಸರ್ವರೂ ರೇಣುಕಾದೇವಿಯನ್ನೂ, ಜಮದಗ್ನಿ ಋಷಿಯನ್ನೂ ಪರಮಾ ನಂದದಿಂದ ಪೂಜಿಸಿದರು ಮತ್ತು ತುಷ್ಟಿಪಡಿಸಿದರು. ಆ ಮಹದುತ್ಸ ವವನ್ನು ಕಂಡು ಅವಿವೇಕಿಗಳಾದ ರಾಜಪುತ್ರರಿಗೆ ಸಹನವಾಗದೆ ರೇಣುಕರಾಜನನ್ನು ವಧಮಾಡಬೇಕೆಂದು ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾಗಿ ಮೇಲ್ವರಿದು ಬಂದರು. ಆಗ ಆ ಮಹಾಶೂರನಾದ ರೇಣುಕರಾಜನೂ ಸಹ ರಥ, ಗಜ, ಅಶ್ವ, ಪದಾತಿಗಳೆಂಬ ಚತುರಂಗ ಸೇನೆಯೊಡನೆ ಯುದ್ಧಕ್ಕೆ ಸನ್ನದ್ಧನಾಗಿ ಬಂದನು. ಎರಡೂ ಪಕ್ಷದವರಿಗೆ ಭಯಂಕರ ಸಂಗ್ರಾಮವಾಯಿತು. ಆ ಮಹಾಬಲಶಾಲಿಗಳಾದ ರಾಜಪುತ್ರರೆಲ್ಲರು ಶಸ್ತ್ರಾಸ್ತ್ರಗಳ ಮಳೆಯನ್ನೇ ರೇಣುಕರಾಜನ ಮೇಲೆ ಸುರಿಸಿದರು. ಅವೆಲ್ಲವು ಪರ್ವತಕ್ಕೆ ಕಮಲದ ಎಲೆಗಳಿಂದ ಬಡಿದಂತೆ ಫಲರಹಿತವಾಗುತ್ತಿದ್ದವು. ರೇಣುಕರಾಜನು ಪ್ರತಿಯಾಗಿ ಬಾಣಪ್ರಯೋಗ ಮಾಡಿ ಸರ್ವ ವೀರ ರನ್ನು ದುಃಖಗೊಳಿಸುತ್ತಿದ್ದನು. ಹೀಗೆ ಭಯಂಕರ ಯುದ್ಧ ನಡೆದದ್ದನ್ನು ನೋಡಿ ಪ್ರತಾಪಶಾಲಿಯಾದ ಜಮದಗ್ನಿಯು ಧನುಸ್ಸನ್ನು ಕೈಯೊಳಗ ತಕ್ಕೊಂಡನು. ಆಗ ಸರ್ವ ರಾಜರು ಕ್ರೋಧದಿಂದ ಜಮದಗ್ನಿಯ ಮೇಲೆ, ಅಗ್ನಿಯ ಮೇಲೆ ಶಲಭಗಳು ಬರುವಂತೆ ಬಂದು ಬಾಣಪ್ರಯೋಗ ಮಾಡಿದರು. ಜಮದಗ್ನಿಯು ಅವರ ಬಾಣಗಳನ್ನೆಲ್ಲ ಮಧ್ಯದಲ್ಲಿಯೇ ಖಂಡಿಸಿ, ಪ್ರತಿಬಾಣಗಳಿಂದ ರಾಜರ ಸೈನ್ಯವನ್ನೆಲ್ಲ ನಿಪಾತಮಾಡಿದನು. ಅವನ ಶರಹತಿಯಿಂದ ಅನೇಕರ ಶಿರಗಳೂ, ಅನೇಕರ ಹಸ್ತಪಾದಾದಿ

ಗಳೂ ಅನೇಕರ ದೇಹಗಳೂ ನುಚ್ಚುನೂರಾಗಿ ಕಡಿಯಲ್ಪಟ್ಟವು. ಗಜಾಶ್ವ ರಥಾದಿಗಳೆಲ್ಲವೂ ನಾಶವಾದವು. ಹೀಗೆ ಜಮದಗ್ನಿಯಿಂದ ರಣರಂಗವು ಅತ್ಯಂತ ಭೀಕರವಾಗಿ ಮಾಡಲ್ಪಟ್ಟಿತು. ಆಗ ಭಯಭೀತರಾಗಿ ರಾಜರೆಲ್ಲರು, ಜಮದಗ್ನಿಯನ್ನು ಜಯಿಸುವದು ಅಸಾಧ್ಯವೆಂದು ತಿಳಿದು ಅವನನ್ನು ಬಿಟ್ಟು ಪುನಃ ರೇಣುಕರಾಜನ ಮೇಲೆ ತಿರುಗಿದರು. ಆಗ ಜಮದಗ್ನಿಯು ಅತಿ ಕೋಪದಿಂದ ತನ್ನ ಯೋಗಸಾಮರ್ಥ್ಯದಿಂದ ಅಸಂಖ್ಯ ಸೇನೆಯನ್ನು ಹುಟ್ಟಿಸಿ ರಥಿಕರನ್ನು ರಥಿಕರಿಂದಲೂ, ಗಜಗಳನ್ನು ಗಜಗಳಿಂದಲೂ, ಕುದುರೆಗಳನ್ನು ಕುದುರೆಗಳಿಂದಲೂ, ಪದಾತಿಗಳನ್ನು ಪದಾತಿಗಳಿಂದಲೂ ಧ್ವಂಸಮಾಡಿದನು. ಭೀಕರವಾದ ದಾವಾಗ್ನಿಯು ಘೋರಾರಣ್ಯವನ್ನು ದಹಿಸುವಂತೆ ಸರ್ವರನ್ನೂ ನಾಶಮಾಡಲಾಗಿ ರಕ್ತದ ಕಾಲುವೆಗಳು ಮೇರೆ ದಪ್ಪಿ ಹರಿದವು. ರಣರಂಗವೆಲ್ಲ ಅಸ್ಥಿ, ಮಾಂಸ, ನರ, ಚರ್ಮ, ಮಜ್ಜಾ, ಮೇದಸ್ಸುಗಳಿಂದ ಆಚ್ಛಾದಿಸಲ್ಪಟ್ಟಿತು. ಆಗ ಶೇಷವಾಗಿ ಉಳಿದವರು ಮರಣದ ಭಯದಿಂದ ದಶದಿಕ್ಕಿಗೆ ಪಲಾಯನ ಮಾಡುವಂಥವರಾದರು.

---

## ೧೨ನೇ ಅಧ್ಯಾಯ

**ಸ್ಕಂದ:**—ಹೇ ತಾಪಸರೇ, ಯುದ್ಧದಲ್ಲಿ ಸರ್ವ ಅರಸರೂ ಅಪಜಯಪಟ್ಟು ಪಲಾಯನ ಮಾಡಿದ ಮೇಲೆ, ರೇಣುಕರಾಜನು ಪರಮಾನಂದದಿಂದ ಶುಭ ವಾದ ತಿಥಿಗಳಿಂದೊಡಗೂಡಿದ ಸುಮುಹೂರ್ತದಲ್ಲಿ ಅತ್ಯಂತ್ಯೋತ್ಸವ ದಿಂದ ರೇಣುಕಾದೇವಿಯನ್ನು ಜಮದಗ್ನಿ ಋಷಿಗೆ ಕೊಟ್ಟು ಲಗ್ನಮಾಡಿ ದನು. ಬಂಗಾರದಿಂದ ನಿರ್ಮಿತವಾದ ರತ್ನಖಚಿತ ಅನೇಕ ರಥಗಳನ್ನೂ, ಪರ್ವತಪ್ರಾಯವಾದ ಆಭರಣಗಳಿಂದ ಶೋಭಿತವಾದ ಅನೇಕ ಆನೆ ಗಳನ್ನೂ, ವಾಯುವನ್ನು ಸಹ ವೇಗದಿಂದ ಗೆಲ್ಲುವ ಅತಿ ಸುಂದರವಾದ ವಸ್ತ್ರಾಲಂಕಾರಗಳಿಂದೊಪ್ಪುವ ಅನೇಕ ಕುದುರೆಗಳನ್ನೂ, ಕಾಮಧೇನುವಿಗೆ ಸದೃಶವಾದ ಹೇಮಾಲಂಕಾರಗಳಿಂದ ಭರಿತವಾದ ಅನೇಕ ಗೋವು ಗಳನ್ನೂ, ವಿಪುಲ ಧನಕನಕರತ್ನಾದಿಗಳನ್ನೂ ಜಮದಗ್ನಿಯ ಪ್ರೀತ್ಯರ್ಥ ವಾಗಿ ಕೊಟ್ಟನು. ಇದಲ್ಲದೆ ಅತ್ಯಂತ ರೂಪವತಿಯರಾದ ಸದ್ಗುಣ

ಗಳಿಂದೊಪ್ಪುವ ತರುಣ ಸ್ತ್ರೀಯರನ್ನು ದಿವ್ಯವಸ್ತ್ರಾಭರಣಗಳಿಂದಲಂಕರಿಸಿ ರೇಣುಕಾದೇವಿಯ ಸೇವೆಗೋಸ್ಕರ ರೇಣುಕರಾಜನು ಅನೇಕರನ್ನು ಕೊಡುವಂಥವನಾದನು. ಈ ಪ್ರಕಾರ ರೇಣುಕರಾಜನು, ಅಳಿಯನಾದ ಜಮದಗ್ನಿಯನ್ನು ವಿಪುಲ ಧನಕನಕ ರತ್ನವಸ್ತ್ರ ಆಭರಣಯಾನಾದಿಗಳಿಂದ ಸತ್ಕರಿಸಿ, ಪರಮಪವಿತ್ರಳಾದ ಜಗದ್ಧೋರಕಳಾದ ರೇಣುಕಾದೇವಿಯನ್ನು ರತ್ನಾಭರಣಗಳಿಂದ ಶೃಂಗರಿಸಿ ಜಮದಗ್ನಿಗೆ ಸಮರ್ಪಿಸಿದನು. ಆ ಮೇಲೆ ಮಹಾಪ್ರತಾಪಶಾಲಿಯಾದ ಋಚಿಕ ಮುನಿಯನ್ನು ಅತ್ಯಂತ ಭಕ್ತಿಪೂರ್ವಕವಾಗಿ ಪೂಜಿಸಿ, ದಿವ್ಯವಸ್ತ್ರಾಭರಣಗಳಿಂದ ತುಷ್ಟಿಪಡಿಸಿ, ಪಾಪವಿನಾಶಿನಿಯಾದ ರೇಣುಕಾದೇವಿಯನ್ನು ಕರೆತಂದು ಮುನಿಯ ಪಾದಕ್ಕೆ ಕೆಡವಿ ರೇಣುಕರಾಜನು ಅಂದನು:—ಎಲೈ ಮುನಿಶ್ರೇಷ್ಠನೇ, ಈ ರೇಣುಕಾದೇವಿಯು ನಿನ್ನ ಸೊಸೆಯು, ಈಕೆಯು ಪಾಪರಹಿತಳೂ ಜಗದ್ಧಿತಾರ್ಥವಾಗಿ ಜನಿಸಿದವಳೂ ಇದ್ದಾಳೆ. ಈಕೆಯನ್ನು ಧರ್ಮದಿಂದ ಪರಿಪಾಲನೆ ಮಾಡಬೇಕೆಂದು ವಿನಯದಿಂದ ಬೇಡಿಕೊಳ್ಳುತ್ತೇನೆ.

**ಋಚಿಕ**:—ಎಲೈ ಪುಣ್ಯಪುಂಜನಾದ ನೃಪನೇ, ಯಾವಾಕೆಯು ದರ್ಶನ ಮಾತ್ರದಿಂದಲೇ ಯಜ್ಞಯಾಗಾದಿಗಳನ್ನು ಮಾಡಿದ ಫಲವು ನರರಿಗೆ ಪ್ರಾಪ್ತವಾಗುವದೋ ಅಂಥ ರೇಣುಕಾದೇವಿಯು ನನ್ನ ಸೊಸೆಯಾದಳೆಂದ ಮೇಲೆ ನನ್ನ ಪುಣ್ಯಕ್ಕೆ ನೆಲೆಯಿಲ್ಲವು, ನಾನು ಧನ್ಯನಾದೆನು, ಕೃತ್ಯಕೃತ್ಯನಾದೆನು. ಈಕೆಯ ನಾಮಸಂಕೀರ್ತನದಿಂದಲೇ ನರರು ಸಕಲ ಪಾಪರಹಿತರಾಗಿ ದುರ್ಲಭವಾದ ಸಿದ್ಧಿಯನ್ನು ಪಡೆಯುತ್ತಾರೆ. ರೂಪದಿಂದ ಸರ್ವರಲ್ಲಿಯೂ ಶ್ರೇಷ್ಠಳಿರುವಂತೆ, ಗುಣದಿಂದಲೂ ಈಕೆಯು ಸರ್ವರಲ್ಲಿ ಶ್ರೇಷ್ಠಳಿದ್ದಾಳೆ. ಈ ಸಂಗತಿಯನ್ನು ನಾನು ಜ್ಞಾನದೃಷ್ಟಿಯಿಂದ ಮೊದಲೇ ತಿಳಿದಿದ್ದೇನೆ. ಈಕೆಯು ಪುತ್ರವತಿಯೂ, ಪತಿಭಕ್ತಿಪರಾಯಣಳೂ, ಪುಣ್ಯಶಾಲಿಯೂ, ತ್ರೈಲೋಕ್ಯವಂದಿತಳೂ ಆಗುವಳೆಂಬುದರಲ್ಲಿ ಏನೂ ಸಂಶಯವಿಲ್ಲ.

**ರೇಣುಕ**:—ಹೇ ಮಹಾಮುನಿಯೇ, ಈವತ್ತಿಗೆ ನನ್ನ ಜನ್ಮವು ಸಫಲವಾಯಿತು. ಅನೇಕ ಜನ್ಮದಲ್ಲಿ ಮಾಡಿದ ಪುಣ್ಯದ ಫಲವು ಲಭಿಸಿತು. ಯಾಕಂದರೆ ಈಶ್ವರಸ್ವರೂಪನಾದ ಜಮದಗ್ನಿಯು ನನಗೆ ಅಳಿಯನೂ ಮತ್ತು ತಪೋನಿಷ್ಠರೂ, ಸತ್ಯವ್ರತರೂ, ಜಿತೇಂದ್ರಿಯರೂ, ಜ್ಞಾನ

ನಿಷ್ಠರೂ ಆದ ನೀವು ನನಗೆ ತಂದೆಗಳಾದಿರಿ ಇದು ನನ್ನ ಮಹತ್ಪುಣ್ಯದ ಫಲವು.

**ಋಚಿಕ**:—ಎಲೈ ನೃಪವರನೇ, ಈಗ ನಾನು ಪುತ್ರಸಮೇತನಾಗಿ ಆಶ್ರಮಕ್ಕೆ ಹೋಗುವೆನು, ನಿನಗೆ ಕಲ್ಯಾಣವಾಗಲಿ. ನನಗೆ ಅಪ್ಪಣೆಯನ್ನು ಕೊಡುವಂಥವನಾಗು.

---

# ೧೩ನೇ ಅಧ್ಯಾಯ

**ಸ್ಕಂದ**:—ಎಲೈ ಮುನಿಶ್ರೇಷ್ಠರೇ, ಋಚಿಕಮುನಿಯ ವಚನದಂತೆ ರೇಣುಕ ರಾಜನು ಆಗ ತನ್ನ ಚತುರಂಗಬಲವನ್ನೊಡಗೊಂಡು ಕಾಂಬೋಜ ದೇಶಕ್ಕೆ ಜಮದಗ್ನಿಯನ್ನು ಕೂಡಿಕೊಂಡು ಬಂದನು. ಆ ಮೇಲೆ ಅವನು ಕೌಶಲ ಮೊದಲಾದ ಅನೇಕ ದೇಶಗಳನ್ನು ಜಮದಗ್ನಿಗೆ ತೋರಿಸಿ, ಅವನಿಗೆ ರಾಜ್ಯ ಕೊಟ್ಟು, ಕನ್ಯಾಕುಬ್ಜವೆಂಬ ಪಟ್ಟಣದಲ್ಲಿ ಇಟ್ಟು, ಏಕವೀರಾದೇವಿಯನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ರೇಣುಕರಾಜನು ತನ್ನ ಸೇನಾಸಮೇತ ನಾಗಿ ಸ್ವಸ್ಥಾನಕ್ಕೆ ಆಗಮಿಸಿದನು. ಆ ಮೇಲೆ ದೇವೇಂದ್ರನು ಸ್ವತಃ ದೇವತೆಗಳೊಡನೆ ಬಂದು, ಅತ್ಯಂತ ಭಕ್ತಿಪೂರ್ವಕವಾಗಿ ಜಗನ್ಮಾತೆಯಾದ ರೇಣುಕಾದೇವಿಗೆ ಕಲ್ಪತರುವನ್ನೂ, ಕಾಮಧೇನುವನ್ನೂ, ಚಿಂತಾಮಣಿ ಯನ್ನೂ, ಸ್ಪರ್ಶಮಣಿಯನ್ನೂ, ಸಿದ್ಧಪಾದುಕೆಗಳನ್ನೂ ಕೊಟ್ಟು ನಾನಾ ವಿಧದ ವಸ್ತ್ರಾಭರಣಗಳಿಂದ ರೇಣುಕಾದೇವಿಯನ್ನೂ ಜಮದಗ್ನಿಯನ್ನೂ ಸತ್ಕರಿಸಿ ನಮಸ್ಕರಿಸಿ, ಸರ್ವತೀರ್ಥೋದಕಗಳಿಂದ ಅವರಿಗೆ ಅಭಿಷೇಕ ಮಾಡಿದನು. ಮತ್ತು ಸುರಪತಿಯು ತನ್ನ ನಂದನವನದೊಳಗಿದ್ದ ಪಾರಿ ಜಾತ ಮೊದಲಾದ ಉತ್ತಮೋತ್ತಮ ಫಲಪುಷ್ಪಗಳಾಗತಕ್ಕ ಗಿಡಗಳನ್ನು ತರಿಸಿ, ರೇಣುಕಾಶ್ರಮದಲ್ಲಿ ಹಚ್ಚಿಸಿ, ಪುನಃ ಪುನಃ ರೇಣುಕಾದೇವಿಯನ್ನೂ ಜಮದಗ್ನಿಯನ್ನೂ ಪ್ರೀತಿಯಿಂದಲೂ ಭಕ್ತಿಯಿಂದಲೂ ಪೂಜಿಸಿ, ವಸ್ತ್ರಾ ಲಂಕಾರಗಳಿಂದ ತುಷ್ಟಿಪಡಿಸಿ, ದೇವೇಂದ್ರನು ಅವರ ಆಶೀರ್ವಾದ ಪಡೆದು ತನ್ನ ಸ್ಥಾನಕ್ಕೆ ಹೋದನು. ಆ ಮೇಲೆ ಪುಣ್ಯಕಾರಕವಾದ ಭಾಗೀರಥೀ ತೀರದಲ್ಲಿರುವ ಪಟ್ಟಣದಲ್ಲಿ ಸರ್ವ ಮುನಿಗಳಿಂದೊಡಗೂಡಿ ಜಮದಗ್ನಿಯು



ಶ್ರೀ ವಿಷ್ಣು ಭಗವಾನನು ಶ್ರೀ ಮಹಾದೇವರ ಆಜ್ಞೆಯಿಂದ
ಶ್ರೀ ರೇಣುಕಾದೇವಿಯ ಗರ್ಭದಲ್ಲಿ ಜನಿಸಲಿಕ್ಕೆ ಶ್ರೀ ನಾರದನು ಶ್ರೀ ದೇವಿಯ
ಸಮ್ಮತಿಯನ್ನು ಕೇಳುವನು



ಶ್ರೀ ರೇಣುಕಾದೇವಿಯ ಗರ್ಭಪ್ರವೇಶ ಮಾಡಲಿಕ್ಕೆ ಶ್ರೀ ವಿಷ್ಣು ಭಗವಾನನು
ಗರುಡ ವಿಮಾನದಿಂದ ಭೂಲೋಕಕ್ಕೆ ಅವತರಿಸುವದಕ್ಕೆ
ಕುಬೇರನ ಕೂಡ ಬರುವದು

ರೇಣುಕಾದೇವಿಯು ಸಹಿತ ಸುಖದಿಂದ ವಾಸಮಾಡುವಂಥವನಾದನು. ಆ ಆಶ್ರಮದಲ್ಲಿ ಋಷಿಗಳೂ, ಬ್ರಾಹ್ಮಣರೂ, ದೇವತೆಗಳೂ, ಕಿನ್ನರರೂ, ಸಿದ್ಧರೂ, ವಿದ್ಯಾಧರರೂ ರೇಣುಕಾದೇವಿಯನ್ನು ಆಶ್ರಯಿಸಿ ವಾಸಿಸಿದರು. ನಿತ್ಯದಲ್ಲಿ ಅಗ್ನಿತ್ರಯವನ್ನು ಸೇವಿಸುತ್ತ ಜಮದಗ್ನಿಯು ಪ್ರಿಯಳನ್ನು ಕೂಡಿಕೊಂಡು ಗೃಹಸ್ಥಧರ್ಮವನ್ನು ಪಾಲಿಸುವಂಥವನಾದನು. ರೇಣುಕಾದೇವಿಯು ಕಾಮಧೇನುವನ್ನು ನಮಸ್ಕರಿಸಿ, ಭಕ್ತಿಯಿಂದ ಪೂಜಿಸಿ, ಇಷ್ಟಿತಾರ್ಥವನ್ನು ಪ್ರಾರ್ಥಿಸಲಾಗಿ ಅದು ಅವಳಿಗೆ ಅವಳು ಇಚ್ಛಿಸಿದ್ದನ್ನೆಲ್ಲ ಕೊಡುವದು. ಅದರಿಂದ ಅವರು ದೇವತೆಗಳಿಗೆ ಹವ್ಯವನ್ನೂ ಪಿತೃಗಳಿಗೆ ಕವ್ಯವನ್ನೂ, ದರಿದ್ರರಿಗೂ ಇಂದ್ರಿಯರಹಿತರಿಗೂ ಅನ್ನಾದಿಗಳನ್ನೂ ಕೊಟ್ಟು ತೃಪ್ತಿಪಡಿಸುತ್ತಿದ್ದರು. ರೇಣುಕಾದೇವಿಯು ಆಜ್ಞಾಪಿಸಿದ ಕೂಡಲೇ ಪರುಷವೂ ಕಲ್ಪವೃಕ್ಷವೂ, ಮಹರ್ಷಿಯಾದ ಜಮದಗ್ನಿಯು ಚಿಂತಿಸಿದ್ದನ್ನು ತೀವ್ರವಾಗಿ ಕೊಡುವವು. ಹೀಗೆ ಜಮದಗ್ನಿಯು ರೇಣುಕಾದೇವಿಯನ್ನು ಕೂಡಿಕೊಂಡು ಗೃಹಸ್ಥಧರ್ಮದಿಂದ ಆಚರಿಸತಕ್ಕ ಆತಿಥ್ಯಧರ್ಮದಿಂದ ಮೂರು ಲೋಕವು ತೃಪ್ತವಾಯಿತು. ಹೀಗೆ ಕೆಲವು ದಿವಸಗಳು ಹೋದ ಮೇಲೆ, ಅವರಿಗೆ ಐದು ಮಂದಿ ಗಂಡುಮಕ್ಕಳು ಜನಿಸಿದರು. ಅಗ್ನಿ, ಸೂರ್ಯ, ಇಂದ್ರ, ವಾಯು, ಅಚ್ಯುತರೆಂಬ ದೇವತೆಗಳೇ ಲೋಕೋದ್ಧಾರಕ್ಕಾಗಿ ರೇಣುಕಾದೇವಿಯ ಪುಣ್ಯಗರ್ಭದಲ್ಲಿ ಜನಿಸಿದರು. ಅಗ್ನಿಯು ವಸು ಎಂಬ ಹೆಸರಿನಿಂದಲೂ, ವಾಯು ವಿಶ್ವಾವಸು ಎಂಬ ಹೆಸರಿನಿಂದಲೂ, ಸೂರ್ಯನು ಬೃಹದ್ಭಾನು ಎಂಬ ಹೆಸರಿನಿಂದಲೂ, ಇಂದ್ರನು ಬೃಹತ್ಕರ್ಣನೆಂಬ ಹೆಸರಿನಿಂದಲೂ, ಜನಿಸಿದರು. ರೇಣುಕಾದೇವಿಯ ಈ ನಾಲ್ಕು ಮಂದಿ ಮಕ್ಕಳ ಹೆಸರನ್ನು ಕೇಳಿದ ಮಾತ್ರದಿಂದಲೇ ಸರ್ವ ಸ್ತ್ರೀಪುರುಷರು ಸಕಲಪಾಪಗಳಿಂದ ಮುಕ್ತರಾಗುತ್ತಾರೆ. ಈ ನಾಲ್ವರು ಪುತ್ರರು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಗಿ, ಸಕಲ ವೇದಶಾಸ್ತ್ರಗಳನ್ನು ಕಲಿತು ಪ್ರವೀಣರಾಗಿ, ದೇವಬ್ರಾಹ್ಮಣ ಸೇವೆಯನ್ನು ಮನಃಪೂರ್ವಕವಾಗಿ ಮಾಡತೊಡಗಿದರು. ಹೀಗೆ ಸುಖದಿಂದ ಒಂದಾನೊಂದು ದಿವಸ ರೇಣುಕಾದೇವಿಯು ಕಲ್ಪವೃಕ್ಷದ ಬುಡದಲ್ಲಿ ಕುಳಿತಿರಲಾಗಿ ತ್ರಿಲೋಕಸಂಚಾರಿಯಾದ ನಾರದಮುನಿಯು ತ್ರಿಜಗತ್ಪಾಲಕನಾದ ನಾರಾಯಣನ ಆಜ್ಞೆಯಿಂದ ಜಗದಾಂಬೆಯ ಸನ್ನಿಧಿಗೆ ಬರುವಂಥವನಾದನು

ಮತ್ತು ಪಾಪರಹಿತಳಾಗಿಯೂ ಪುಣ್ಯಮೂರ್ತಿಯಾಗಿಯೂ ಇರುವ ರೇಣುಕಾದೇವಿಯನ್ನು ಕಂಡು ಪರಮಾನಂದದಿಂದ ದೀರ್ಘದಂಡ ನಮಸ್ಕಾರ ಮಾಡಿ ಎದ್ದುನಿಂತು ಕೈಮುಗಿದು ಹೀಗೆ ಅನ್ನುವಂಥವನಾದನು.

**ನಾರದ:**—ಹೇ ಜಗಜ್ಜನನಿಯೇ, ಲೋಕೋದ್ಧಾರಾರ್ಥವಾಗಿ ನಿನ್ನ ಪುಣ್ಯ ಗರ್ಭವನ್ನು ಪ್ರವೇಶಿಸುವದಕ್ಕೆ ಇಚ್ಛಿಸಿ, ಜಗತ್ಪಾಲಕನಾದ ನಾರಾಯಣನು ನನ್ನನ್ನು ನಿಮ್ಮ ಕಡೆಗೆ ಒಂದು ಮಾತಿನ ವಿಷಯಕ್ಕೆ ವಿಚಾರಿಸಿಕೊಂಡು ಬರಲಿಕ್ಕೆ ಕಳಿಸಿಕೊಟ್ಟಿದ್ದಾನೆ. ಆ ಸಂಗತಿಯು ಯಾವದೆಂದರೆ "ಪೂರ್ವದಲ್ಲಿ ನಾನು ಅದಿತಿಯ ಗರ್ಭದಿಂದ ಜನಿಸುವಾಗ ಆಕೆಯು ಅಲ್ಪಗರ್ಭದಿಂದ ನಾನು ವಾಮನರೂಪದಿಂದ ಜನಿಸಿದೆನು. ಆದರೆ ಈಗ ನೀನು ಯಾವ ರೂಪವನ್ನು ಗರ್ಭದಲ್ಲಿ ಧರಿಸಲಿಕ್ಕೆ ಶಕ್ತಳಿರುವಿ ಅದನ್ನು ಹೇಳು, ಅಂದರೆ ಅದೇ ಪ್ರಕಾರದ ರೂಪದಿಂದ ನಾನು ನಿನ್ನ ಗರ್ಭವನ್ನು ಪ್ರವೇಶ ಮಾಡುವೆನು. ನನ್ನ ಸರ್ವರೂಪವನ್ನು ಉದರದಲ್ಲಿ ಧರಿಸಲಿಕ್ಕೆ ಯಾವ ಸ್ತ್ರೀಯಳೂ ಸಮರ್ಥಳಾಗಳು. ಯಾಕಂದರೆ ನನ್ನ ನಾಭಿಕಮಲದ ವಿಸ್ತಾರವನ್ನು ಜಗದುತ್ಪಾದಕನಾದ ಬ್ರಹ್ಮನು ಸಹ ತಿಳಿಯಲಾರನು. ಆದಕಾರಣ ನೀನು ಎಂಥ ರೂಪವನ್ನು ಧರಿಸಲಿಕ್ಕೆ ಶಕ್ತಳಿರುವಿ ಹೇಳು" ಎಂಬದನ್ನು ಕೇಳಿಕೊಂಡು ಬರಲಿಕ್ಕೆ ನನ್ನನ್ನು ನಾರಾಯಣನು ಕಳುಹಿದನು ಎಂದು ನಾರದನು ಅನ್ನಲು, ದೇವಿಯು ಆ ಮಾತಿಗೆ ನಕ್ಕು, ನಾರದಮುನಿಯನ್ನು ಕುರಿತು, ಹೇ ಜ್ಞಾನಿಗಳಲ್ಲಿ ಶ್ರೇಷ್ಠನಾದ ಮುನಿಯೇ, ಬಾಲತ್ವದಿಂದ ಈಶ್ವರನು ತಿಳಿಯದೆ ಹೀಗೆ ಕೇಳಲಿ, ಆದರೆ ವಯೋವೃದ್ಧನೂ ಜ್ಞಾನಿಯೂ ಆದ ನೀನು ಹೀಗೆ ಕೇಳುವದು ಯುಕ್ತವೇ? ಮಕ್ಕಳು ತಾಯಿಯನ್ನು ಕೇಳಿ ಗರ್ಭದೊಳಗೆ ಬರುವಂಥ ಮಾತು ಅತ್ಯಂತ ನೂತನವಾದಂಥಾದು ಇರುತ್ತದೆ. ನಾರಾಯಣನ ಅಪ್ಪಣೆಯಿಂದ ನೀನು ಬಂದು ಹೇಳಿದ ಸಂಗತಿಯಂಥ ಸಂಗತಿಯನ್ನು ನಾನಾಗಲಿ ಅಥವಾ ಸರ್ವಲೋಕದೊಳಗಿನ ಸ್ತ್ರೀಯರಾಗಲಿ ಯಾರೂ ಎಂದೆಂದೂ ಕೇಳಿರುವದಿಲ್ಲ. ಆದರೂ ನಾರಾಯಣನ ವಚನವನ್ನು ನಿನ್ನ ಮುಖದಿಂದ ಕೇಳಿದ್ದಕ್ಕೆ ಉತ್ತರವೇನಂದರೆ—ನಾರಾಯಣನು ತನ್ನ ದಿವ್ಯಶಕ್ತಿಯನ್ನು ಕೂಡಿಕೊಂಡು ಬೇಕಾದ ರೂಪದಿಂದ ಬಂದು ನನ್ನ ಗರ್ಭವನ್ನು ಪ್ರವೇಶಮಾಡಲಿ, ಅದೇ ನನಗೆ ಇಷ್ಟವಾದದ್ದೆಂದು ಆ ಮಹಾಪ್ರಭುವಿಗೆ ಹೋಗಿ ಹೇಳು ಎಂದು ರೇಣುಕಾ

ದೇವಿಯು ಹೇಳಲು, ನಾರದನು ಭಕ್ತಿಯಿಂದ ಕೇಳಿಕೊಂಡು ದೀರ್ಘ ದಂಡನಮಸ್ಕಾರಮಾಡಿ, ಜಗದಾಂಬೆಯ ಆಜ್ಞೆಯನ್ನು ಪಡೆದು ಹೊರಟು ಹೋದನು. ದೇವಿಯು ಸ್ವಗೃಹವನ್ನು ಪ್ರವೇಶಮಾಡಿದಳು. ನಾರದ ಮುನಿಯು ವೇಗದಿಂದ ನಾರಾಯಣನ ಕಡೆಗೆ ಹೋಗಿ ವಂದಿಸಿ, ರೇಣುಕಾ ದೇವಿಯು ಹೇಳಿದ ಸಂಗತಿಯನ್ನೆಲ್ಲ ವಿಸ್ತಾರವಾಗಿ ಹೇಳಿದನು. ಆಗ ನಾರಾಯಣನು ದೇವಿಯ ಸಂದೇಶವನ್ನು ಕೇಳಿ ಅತಿವಿಸ್ಮಿತನಾಗಿ, ನಾರದನಿಗೆ ನಿರೋಪಕೊಟ್ಟು ಕಳುಹಿಸಿ, ತನ್ನ ಪರಮಶಕ್ತಿಸಹಿತನಾಗಿ ಜಗದೋದ್ಧಾರಕ್ಕೋಸುಗ ಏಕವೀರಾದೇವಿಯನ್ನು ಸ್ಮರಿಸಿ ಆಕೆಯ ಪುಣ್ಯಗರ್ಭವನ್ನು ಪ್ರವೇಶಮಾಡುವಂಥವನಾದನು. ತ್ರಿಭುವನಪತಿಯಾದ ಸ್ವಯಂಪ್ರಕಾಶ ಹರಿಯು ರೇಣುಕಾದೇವಿಯ ಉದರವನ್ನು ಹೊಕ್ಕಕೂಡಲೇ ಅತ್ಯಂತ ಕೌತುಕ ಸಂಗತಿಯು ಸಂಭವಿಸಿತು. ಪರಮಾನಂದದಿಂದ ಭೂಮಿಯು ಅಲುಗಾಡಿತು, ಸಕಲ ಗಿರಿಗಳೂ, ವನಗಳೂ, ಹರುಷದಿಂದ ಕುಣಿಯುವಂತೆ ಚಲಿಸಿದವು. ಹತ್ತು ದಿಕ್ಕುಗಳು ಮೋದದಿಂದ ನಗುವಂತೆ ಶುಭ್ರವಾಗಿ ಬೆಳಗಿದುವು. ಹೀಗೆ ಶುಭಲಕ್ಷಣಗಳಿಂದ ರೇಣುಕಾ ದೇವಿಯ ಗರ್ಭವು ಬೆಳೆದು, ವೈಶಾಖಮಾಸದಲ್ಲಿ ಶುಕ್ಲಪಕ್ಷದ ತೃತಿಯಾ ತಿಥಿ; ಪುನರ್ವಸು ನಕ್ಷತ್ರದಲ್ಲಿ ಜಗಜ್ಜನನಿಯ ಪುಣ್ಯೋದರದಿಂದ ಹರಿಯು ಜನನವಾದನು. ಆ ಕಾಲದಲ್ಲಿ ರಾಮದೇವನ ಮೇಲೆ ಪುಷ್ಪವೃಷ್ಟಿಯು ಸುರಿಯಿತು. ದೇವದುಂದುಭಿಗಳು ಮೊಳಗಿದುವು. ದೇವಋಷಿಗಳು ಪರಮಾನಂದಪಡುವಂಥವರಾದರು. ಶಂಖ, ತಾಳ, ವೀಣಾ, ವೇಣುಕ ಮೊದಲಾದುವುಗಳ ಧ್ವನಿಯು ಭೂಮಂಡಲವನ್ನು ತುಂಬಿತು. ಆದರೆ ಪೃಥ್ವೀಪಾಲಕರಾದ ಕ್ಷತ್ರಿಯರು ಶರೀರಕ್ಕೆ ಅಗ್ನಿಸ್ಪರ್ಶವಾದಂತೆ ಸರ್ವರೂ ಮನದೊಳಗೆ ಭೀತಿಯಿಂದ ನಡುಗುವಂಥವರಾದರು. ದೇವಶ್ರೇಷ್ಠನಾದ ರಾಮನು ಜನಿಸಿದ ಕೂಡಲೇ ಕ್ಷತ್ರಿಯರಲ್ಲಿ ಅತಿ ಪರಾಕ್ರಮಿಯಾದ ಸಹಸ್ರಾರ್ಜುನನ ಸಹಸ್ರಬಾಹುಗಳು ಪ್ರಚಂಡವಾದ ಗಾಳಿಯಿಂದ ಮರಗಳು ಚಲಿಸುವಂತೆ ಭಯದಿಂದ ಚಲಿಸಿದವು. ಆಕಾಲದಲ್ಲಿ ನಿರ್ನಿಮಿತ್ತವಾಗಿ ತನ್ನ ಬಾಹುಗಳು ಚಲಿಸಿದ್ದನ್ನು ಕಂಡು ಕೌತುಕಪಟ್ಟು ಭೀತಿಯಿಂದ ಸಹಸ್ರಾರ್ಜುನನು ತಾಯಿಗೆ ಹೀಗೆ ಅಂದನು.

**ಅರ್ಜುನ:**— ಹೇ ಜನನಿಯೇ, ಏನೂ ಕಾರಣವಿಲ್ಲದೆ ನನ್ನ ಭುಜಗಳು ನಡುಗುತ್ತವೆ. ಹೃದಯದಲ್ಲಿ ಅತ್ಯಂತ ಭೀತಿಯು ಬರುತ್ತದೆ. ಸರ್ವದಿಕ್ಕುಗಳು

ತಿರುಗುವಂತೆ ಕಾಣುತ್ತವೆ. ಸೂರ್ಯನು ಕಾಣಿಸುವದಿಲ್ಲ, ಭೂಮಿ ಎಲ್ಲ ಕತ್ತಲೆಯಿಂದ ಮುಸುಕಿದಂತೆ ತೋರುತ್ತದೆ.

**ರಾಕಾವತಿ:**—ಹೇ ವಿಶಾಲಾಕ್ಷ ಪುತ್ರನೇ ಏನೂ ಭಯಪಡಬೇಡ. ಸರ್ವ ದೇವತೆಗಳಿಗೆ ನಿನ್ನ ಭಯವು ಅತಿಶಯವಾಗಿ ಇರುತ್ತಿರಲಿಕ್ಕೆ ನಿನಗೆ ಅನ್ಯರ ಭಯವಿರುವದೇ ? ಬ್ರಾಹ್ಮಣರ ಕೂಡ ಮಾತ್ರ ನೀನು ವಿರೋಧಮಾಡತಕ್ಕದ್ದಲ್ಲ, ಯಾಕಂದರೆ ಬ್ರಾಹ್ಮಣರು ಪೂಜ್ಯರು. ಅವರನ್ನು ಸೇವಿಸುವದರಿಂದ ದೇವತೆಗಳೂ, ಪಿತೃಗಳೂ, ಋಷಿಗಳೂ ತೃಪ್ತಿಪಡುತ್ತಾರೆ. ಕಾರಣ ಯಾರಿಂದಲೂ ಎಂದಾದರೂ ಬ್ರಹ್ಮದ್ವೇಷವು ಮಾಡತಕ್ಕದ್ದಲ್ಲವೆಂದು ಮಗನನ್ನು ಸಂತೈಸಿ ಪುತ್ರನೊಡನೆ ಇರುವಂಥವಳಾದಳು.

---

# ೧೪ನೇ ಅಧ್ಯಾಯ

**ಸ್ಕಂದ:**—ಹೇ ಋಷಿಗಳೇ, ಮಹಾಪರಾಕ್ರಮಿಯಾದ ಪರಶುರಾಮನು ಜನಿಸಿದ ಕೂಡಲೆ, ಜಮದಗ್ನಿ ಮುನಿಯು ಪರಮಾನಂದದಿಂದ ಗೋವುಗಳನ್ನೂ, ರತ್ನ, ಮುತ್ತು, ಧನ, ಕನಕ, ವಸ್ತ್ರಾಭರಣಾದಿಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದನು. ಮುಂದೆ ಅಪ್ರತಿಮ ಸುಂದರನಾದ ರಾಮನು ರೇಣುಕಾ ದೇವಿಯ ಪ್ರಭಾವದಿಂದ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ತಂದೆ ತಾಯಿಗಳಿಗೆ ಅತ್ಯಂತ ಆನಂದವನ್ನು ಕೊಡುವಂಥವನಾದನು. ಹೀಗೆ ಬಾಲಲೀಲೆಯಲ್ಲಿದ್ದ ಕಮಲನೇತ್ರನಾದ ರಾಮನನ್ನೂ ಮಹಾಪತಿವ್ರತಾ ಶಿರೋಮಣಿಯಾದ ಏಕವೀರಾದೇವಿಯನ್ನೂ ನೋಡಿ, ಋಷಿಗಳೂ ರಾಜರೂ ಸರ್ವಜನರೂ ಪರಮಾಶ್ಚರ್ಯವನ್ನು ಪಟ್ಟರು. ಹೇ ರಾಮನೇ ಮೂರು ಲೋಕವನ್ನು ಪಾಲಿಸು, ಕ್ಷತ್ರಿಯ ವಂಶವನ್ನು ನಿಃಶೇಷವಾಗಿ ನಾಶಮಾಡು, ಎಂದು ಚಾರಣರು ಹರುಷದಿಂದ ಕೊಂಡಾಡಿದರು. ಈ ಪ್ರಕಾರ ಸರ್ವಲೋಕದಿಂದ ಹೊಗಳಿಸಿಕೊಳ್ಳುತ್ತಾ, ರೂಪದಲ್ಲಿ ಕಾಮನಿಗೆ ಸರಿಯಾಗಿಯೂ, ತೇಜದಲ್ಲಿ ಅಗ್ನಿಗೆ ಸಮನಾಗಿಯೂ, ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮನಾಗಿಯೂ, ಕ್ಷಮೆಯಲ್ಲಿ ಪೃಥ್ವಿಗೆ ಸಮನಾಗಿಯೂ ಇರುವ ರಾಮನು ತಾಯಿತಂದೆಗಳ ಪ್ರಸಾದದಿಂದ ಸಕಲ ಸದ್ಗುಣಗಳಿಂದ

ಯುಕ್ತನಾಗಿ ಶುಕ್ಲಪಕ್ಷದ ಚಂದ್ರನಂತೆ ಬೆಳೆದನು. ರಾಮನು ಜನನಿ ಜನಕರ ಸೇವೆಯನ್ನು ಒಳ್ಳೇ ಭಕ್ತಿಯಿಂದ ಮಾಡುತ್ತಿದ್ದುದರಿಂದ ಪಿತೃಗಳಿಗೂ, ಮುನಿ ದೇವತೆಗಳಿಗೂ ಅತ್ಯಂತ ಪ್ರಿಯನಾದನು. ಅನಂತರ ಒಂದು ದಿವಸ ರಾಮನು ಉಪನಯನವಾದ ಮೇಲೆ ಭಕ್ತಿಯಿಂದ ತಾಯಿ ತಂದೆಗಳಿಗೆ ನಮಸ್ಕರಿಸಿ ನಗೆಮುಖದಿಂದ "ಎಲೈ ಸರ್ವದೇವತೆಗಳಿಂದ ಹೊಗಳಿಸಿಕೊಳ್ಳತಕ್ಕ ತಾಯಿಯೇ, ಪುಣ್ಯಪುಂಜನಾದ ಜಮದಗ್ನಿ ಋಷಿಯಿಂದ ನಾನು ನಿನ್ನ ಉದರದಲ್ಲಿ ಜನಿಸಿದೆನು. ತಾಯಿತಂದೆಗಳ ಸೇವೆಗಿಂತ ಶ್ರೇಷ್ಠವಾದ ಪುಣ್ಯಪ್ರಾಪ್ತಿಯನ್ನು ಮಾಡತಕ್ಕ ತೀರ್ಥಕ್ಷೇತ್ರಾದಿಗಳು ಮೂರು ಲೋಕದಲ್ಲಿಯೂ ಸತ್ಪುತ್ರರಿಗೆ ಯಾವವೂ ಇಲ್ಲ. ತಾಯಿ ತಂದೆಗಳ ಆಜ್ಞೆ ಪಾಲಿಸುತ್ತ ಅವರ ಸೇವೆ ಮಾಡುವದೇ ಪರಮಧರ್ಮವು. ಈಗ ನಾನು ಕೈಲಾಸಕ್ಕೆ ಹೋಗಿ, ಸರ್ವದೇವತೆಗಳಿಗೆ ಶ್ರೇಷ್ಠನಾದ ಹರನನ್ನು ತಪಸ್ಸಿನಿಂದ ಮೆಚ್ಚಿಸಿ, ಅವನಿಂದ ಧನುರ್ವಿದ್ಯವನ್ನು ಪಡೆದುಕೊಂಡು ಬರಬೇಕೆಂದು ಇಚ್ಛಿಸುತ್ತೇನೆ. ಕಾರಣ ನನಗೆ ಅಪ್ಪಣೆಯನ್ನು ದಯಪಾಲಿಸಬೇಕು. ತಪಸ್ಸಿನಿಂದ ನಾನು ಪರಮಾತ್ಮನನ್ನು ಮೆಚ್ಚಿಸಿದರೆ ಉಮಾರಮಣನಾದ ದೇವನು, ಸಮಗ್ರ ಧನುರ್ವಿದ್ಯಾರಹಸ್ಯವನ್ನು ನನಗೆ ದಯಪಾಲಿಸುವನು" ಎಂದು ಪರಶುರಾಮನು ರೇಣುಕಾದೇವಿಗೆ ಬೇಡಿಕೊಳ್ಳಲು, ಅವಳು ಮಗುವೇ ಅತ್ಯಂತ ಪುಣ್ಯಮೂರ್ತಿಯಾದ ನಿನ್ನ ಜನಕನ ಆಜ್ಞೆಯನ್ನು ಪಡೆದು ಕೈಲಾಸಕ್ಕೆ ಹೋಗಿ, ಪರಮಾತ್ಮನನ್ನು ಮೆಚ್ಚಿಸಿ, ಧನುರ್ವಿದ್ಯವನ್ನು ಪಡೆದು ಶೀಘ್ರವಾಗಿ ಬಾಯೆಂದು ಅಪ್ಪಣೆಯನ್ನು ಕೊಟ್ಟಳು.

---

# ೧೫ನೇ ಅಧ್ಯಾಯ

**ಸ್ಕಂದ:**—ಮುನಿಗಳೇ ಜಗನ್ಮಾತೆಯಾದ ರೇಣುಕಾದೇವಿಯ ಅಪ್ಪಣೆಯನ್ನು ಪಡೆದು, ರಾಮನು, ಪರಮಪೂಜ್ಯನಾದ ತಂದೆಯ ಕಡೆಗೆ ಬಂದು ಭಯ ಭಕ್ತಿಯಿಂದ ದೀರ್ಘದಂಡ ನಮಸ್ಕಾರಮಾಡಿ, ತಾನು ಧನುರ್ವಿದ್ಯಾಪ್ರಾಪ್ತಿಗೋಸುಗ ಪರಮಾತ್ಮನನ್ನು ತಪಸ್ಸಿನಿಂದ ಮೆಚ್ಚಿಸುವುದಕ್ಕೆ ಕೈಲಾಸಕ್ಕೆ ಹೋಗುವ ಇಚ್ಛೆಯನ್ನು ತಂದೆಗೆ ತಿಳಿಸಿ, ಅವನ ಅಪ್ಪಣೆಯನ್ನು

ಪಡೆದು ಕೈಲಾಸಕ್ಕೆ ಹೋದನು. ಆಗ ಅತ್ಯಂತ ಸುಂದರನಾದ ರಾಮ ನನ್ನು ನೋಡಿ ದೇವಸ್ತ್ರೀಯರು ಮೋಹಬುದ್ಧಿಯಿಂದ ಈಕ್ಷಿಸಿದರು. ಬ್ರಹ್ಮಚಾರಿಯೂ, ಜಿತೇಂದ್ರಿಯನೂ, ವೇದವೇದಾಂಗ ಪಾರಂಗತನೂ ಆದ ರಾಮನು ಪರಮಾತ್ಮನ ವಾಸಸ್ಥಾನವಾದ ಕೈಲಾಸದಲ್ಲಿ ಹರನ ಕುರಿತು ಘೋರತಪಶ್ಚರ್ಯವನ್ನು ಮಾಡತೊಡಗಿದನು. ಅವನು ನಿರಾಹಾರಿಯಾಗಿ ಕೇವಲ ವಾಯುಭಕ್ಷಕನಾಗಿ ಮನಸ್ಸನ್ನು ಹೊರಗಿನ ವಿಷಯದಿಂದ ಸೆಳೆದು ಪರಮಾತ್ಮನಲ್ಲಿ ಸ್ಥಾಪಿಸಿ, ಪಂಚಾಗ್ನಿ ಮಧ್ಯದಲ್ಲಿ ತಲೆಕೆಳಗಾಗಿ ಕಾಲುಮೇಲು ಮಾಡಿ ಭಯಭಕ್ತಿಯಿಂದ ಶಿವನನ್ನು ಸ್ತುತಿಸಲಿಕ್ಕೆ ಪ್ರಯುಕ್ತನಾದನು. ಸ್ತೋತ್ರವು—ನಮಃಶಿವಾಯ ಸಕಲಾಯ ಮಹೇಶ್ವರಾಯ | ವಿಶ್ವೇಶ್ವ ರಾಯ ವರದಾಯ ಜಗದ್ಧಿತಾಯ || ಗೌರೀಶ್ವರಾಯ ಗಿರಿಜಾಂಗ | ವಿಭೂ ಷಣಾಯ | ಶರ್ವಾಯಕಾಮದಲನಾಯಹರಾಯ || ತುಭ್ಯಂ | ಭಸ್ಮಾಂಗ ರಾಗ ಭುಜಗಾಧಿಪ || ಭೂಷಣಾಯ | ಗಂಗಾಶಶಾಂಕಗಿರಿಜಾಹಿ ಜಟಾ ಧರಾಯ | ಗೌರೀಪ್ರಿಯಾಯ ವರದಾಯ ಮಹಾವ್ರತಾಯ | ದೈತ್ಯಾಂತ ಕಾಯ ವರದಾಯ ನಮೋನಮಸ್ತೆ || ಈ ಪ್ರಕಾರ ಪರಶುರಾಮನು ಅನನ್ಯ ಭಾವದಿಂದ ಶಿವನನ್ನು ಸ್ತೋತ್ರಮಾಡಲಾಗಿ ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ—ಎಲೈ ಮಗುವೇ, ನಿನ್ನ ತಪಸ್ಸಿಗೆ ನಾನು ಪೂರ್ಣವಾಗಿ ತುಷ್ಟಿ ಪಟ್ಟಿದ್ದೇನೆ. ನಿನ್ನ ವಾಂಛಿತಾರ್ಥವನ್ನು ಬೇಡಿಕೋ, ಈಗಲೆ ಕೊಡು ವೆನು ಎನ್ನಲು, ಪರಶುರಾಮನು ಪರಮಾನಂದದಿಂದ ಹರನ ಪಾದಕ್ಕೆ ನಮಸ್ಕರಿಸಿ, ಕೈಮುಗಿದು ನಿಂತುಕೊಂಡು ವಿನಯದಿಂದ, ಭಕ್ತವತ್ಸಲನಾದ ಮಹಾದೇವನೇ, ಶಸ್ತ್ರಾಸ್ತ್ರ ಸಂಬಂಧವಾದ ಸರ್ವಧನುರ್ವಿದೆಯನ್ನು ಪಡೆ ಯುವ ಇಚ್ಛೆಯಿಂದ ಬಂದಿದ್ದೇನೆ. ನನಗೆ ಆ ಧನುರ್ವಿದ್ಯೆಯನ್ನು ಉಪ ದೇಶಿಸಿ ಉದ್ಧಾರ ಮಾಡಬೇಕು ಎಂದು ಬೇಡಿಕೊಂಡನು. ಆಗ ಶಂಕರನು ಅವನಿಗೆ, ಎಲೋ ನೀನು ಯಾರು? ಸಾಕ್ಷಾತ್ ಹರಿಯಂತೆ ನಿನ್ನ ತೇಜವು ತೋರುವುದು ಎಂದು ಕೇಳಲು, ಪ್ರಭುವೆ ನಾನು ಭೃಗುವಂಶದಲ್ಲಿ ಜನಿಸಿದ ಬ್ರಾಹ್ಮಣನು, ಜಮದಗ್ನಿ ಋಷಿ ಮತ್ತು ರೇಣುಕಾದೇವಿಯರ ಪ್ರಿಯ ಪುತ್ರನು. ತಮ್ಮಿಂದ ಧನುರ್ವಿದ್ಯೆಯನ್ನು ಪಡೆಯಬೇಕೆಂದು ಇಚ್ಛಿಸಿ ತಮ್ಮ ಪಾದಕ್ಕೆ ಬಂದಿದ್ದೇನೆಂದು ಪರಶುರಾಮನು ಪರಮಾತ್ಮನ ಪಾದಕ್ಕೆ ಎರಗಿದನು. ಆಗ ಪರಮಾತ್ಮನು ಹರುಷದಿಂದ ಎಲೋ, ರಾಮನೇ,



ಶ್ರೀ ಜಮದಗ್ನಿ ಪುತ್ರನಾದ ಭಾರ್ಗವರಾಮನ ತಪಸ್ಸಿಗೆ ಮೆಚ್ಚಿ ಶ್ರೀ ಶಂಕರನು
ವರದಾನ ಮಾಡುವದು

ನೀನಾರೆಂಬುವದು ನೂಗೆ ಗೊತ್ತಾಯಿತು. ನಿನಗೆ ಸರ್ವ ಧನುರ್ವಿದ್ಯೆ ಯನ್ನು ಕಲಿಸುವೆನೆಂದು ಅಭಯವಿತ್ತನು.

---

# ೧೬ನೇ ಅಧ್ಯಾಯ

**ಸ್ಕಂದ**:—ಮುನಿಗಳಿರಾ, ಪಾದಕ್ಕೆ ಎರಗಿದ ಸುಂದರ ರಾಮನನ್ನು ಪರಮಾತ್ಮನು ಎತ್ತಿ ಆಲಂಗಿಸಿ, ಹರುಷದಿಂದ ಅವನಿಗೆ ರತ್ನಖಚಿತವಾದ ಪಿನಾಕ ಧನುಸ್ಸನ್ನು ಕೊಟ್ಟು ಧನುರ್ವಿದ್ಯೆಯ ರಹಸ್ಯವನ್ನೆಲ್ಲಾ ಚೆನ್ನಾಗಿ ಕಲಿಸಿದನು. ರಾಮನು ಅದನ್ನೆಲ್ಲಾ ಪರಮಾತ್ಮನ ಕೃಪೆಯಿಂದ ಶೀಘ್ರವಾಗಿ ಕಲಿತನು. ಆ ಮೇಲೆ ಪರಮಾತ್ಮನು ಪ್ರೀತಿಯಿಂದ ರಾಮನಿಗೆ ಪಾಶುಪತ ಮೊದಲಾದ ಶಸ್ತ್ರಾಸ್ತ್ರಗಳನ್ನು ಆದರಪೂರ್ವಕವಾಗಿ ಕೊಟ್ಟನು. ಇತ್ತ ಕಡೆಗೆ ಪರಶುರಾಮನು ಹರನನ್ನು ಆರಾಧಿಸುವದಕ್ಕೆ ಕೈಲಾಸಕ್ಕೆ ಹೋಗಲಾಗಿ, ಉಳಿದ ಮಕ್ಕಳೂ ಪ್ರಬುದ್ಧರಾಗಿ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಲಾಗಿ, ಪತಿಯ ಸೇವೆಯ ಕಾರ್ಯವು ಮುಗಿದ ಮೇಲೆ ರೇಣುಕಾದೇವಿಗೆ ನಿತ್ಯವೂ ಮಾಡುವ ಕಾರ್ಯವು ಏನೂ ಇಲ್ಲದ್ದರಿಂದ ವೇಳೆಗಳೆಯುವದಕ್ಕೆ ಒಬ್ಬ ದಿವ್ಯ ಕುಮಾರಿಯನ್ನು ರೇಣುಕಾದೇವಿಯು ಮನಸ್ಸಿನಿಂದ ರಚಿಸಿ ಆವಳಿಗೆ ತ್ರಿಕುಲಾ ಎಂದು ಹೆಸರಿಟ್ಟಳು. ಯಾಕಂದರೆ ಇವಳು ತನ್ನ (ರೇಣುಕೆಯ) ಕುಲವನ್ನೂ ತನ್ನ ಪತಿಯ ಕುಲವನ್ನೂ ಮತ್ತು ತ್ರಿಕುಲೆಯ ಪತಿಯ ಕುಲವನ್ನೂ ಪಾವನಮಾಡುವಳು. ಆದ್ದರಿಂದ ತ್ರಿಕುಲಾ ಎಂದು ಹೆಸರಿಟ್ಟು, ಅವಳೊಡನೆ ಮನೋರಂಜನೆಯಲ್ಲಿ ಕಾಲಕಳೆಯುತ್ತಿದ್ದಳು. ನಂತರ ಕೈಲಾಸಕ್ಕೆ ಹೋದ ಪರಶುರಾಮನು ತಪಸ್ಸಿನಿಂದ ಪರಮಾತ್ಮನನ್ನು ಮೆಚ್ಚಿಸಿ ಅವನಿಂದ ಧನುರ್ವಿದ್ಯೆಯನ್ನು ಪಡೆದುಕೊಂಡ ಮೇಲೆ ತಾಯಿ ತಂದೆಗಳ ದರ್ಶನವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯುಳ್ಳವನಾಗಿ ಪರಮಾತ್ಮನಿಗೆ, ಎಲೈ ಭಕ್ತವತ್ಸಲನಾದ ಮಹಾದೇವನೇ, ನಿನ್ನ ಕೃಪೆಯಿಂದ ಸಮಸ್ತ ಧನುರ್ವಿದ್ಯೆಯನ್ನು ನಾನು ಕಲಿತೆನು. ಈಗ ನನಗೆ ತಾಯಿತಂದೆಗಳನ್ನು ನೋಡುವ ಇಚ್ಛೆಯಾಗಿದೆ, ಕಾರಣ ಸ್ವಾಮಿ ನನಗೆ ಅಪ್ಪಣೆ ಕೊಡಬೇಕು. ಹಿತಕಾರಿಗಳಲ್ಲಿ ತಂದೆತಾಯಿಗಳೇ ಶ್ರೇಷ್ಠರು,

ಅವರ ಸೇವೆಗೈಯುತ್ತಾ, ಅವರ ಅಪ್ಪಣೆ ಪಾಲಿಸುವದೇ ಪರಮಧರ್ಮವು. ಅವರ ದರ್ಶನ ತೆಗೆದುಗೊಂಡು ಪುನಃ ನಾನು ತಮ್ಮ ಪಾದಕ್ಕೆ ಬರುವೆನು, ಎಂದು ನಮಿಸಿ ಪರಮಾತ್ಮನಿಂದ ಅಪ್ಪಣೆಯನ್ನು ಪಡಕೊಂಡು ರಾಮನು ಶೀಘ್ರವಾಗಿ ತನ್ನ ಪುರಕ್ಕೆ ಬಂದು ತಂದೆತಾಯಿಗಳಿಗೂ, ಅಣ್ಣಂದಿರಿಗೂ ಹರುಷದಿಂದ ನಮಸ್ಕಾರ ಮಾಡಿ ತಂದೆಯನ್ನು ಕುರಿತು ಎಲೈ ಜನಕನೇ, ನಿನ್ನ ಕೃಪೆಯಿಂದ ನಾನು ಕೈಲಾಸಕ್ಕೆ ಹೋಗಿ, ತಪಸ್ಸಿನಿಂದ ಪರಮಾತ್ಮನನ್ನು ಮೆಚ್ಚಿಸಿ, ಸಕಲ ಧನುರ್ವಿದ್ಯಾರಹಸ್ಯವನ್ನು ಅವನಿಂದ ಪಡಕೊಂಡೆನು. ಮತ್ತು ದಿವ್ಯವಾದ ಶಸ್ತ್ರಾಸ್ತ್ರಗಳನ್ನೂ ಮಹತ್ತರವಾದ ಕವಚಗಳನ್ನೂ ಆ ಹರನು ಸಂತುಷ್ಟನಾಗಿ ನನಗೆ ತಾನೇ ಕೊಡುವಂಥವನಾದನು. ಇದೆಲ್ಲ ನನಗೆ ಸಿದ್ಧಿಸಬೇಕಾದರೆ ತಮ್ಮ ಕೃಪೆಯೇ ಕಾರಣವು. ಅನ್ಯವೇನೂ ಇಲ್ಲವೆಂದು ನುಡಿಯಲು, ಜಮದಗ್ನಿಯು ಅತ್ಯಂತ ಹರುಷನಾಗಿ—ಎಲೈ ಕಂದನೇ, ನಿನ್ನ ರೂಪ, ಬಲ, ಧೈರ್ಯ, ತಪಸ್ಸುಗಳು ಪರಮಾಧಾರುಣವಾದಂಥವುಗಳು. ಅವುಗಳನ್ನು ವರ್ಣಿಸಲಿಕ್ಕೆ ಯಾರೂ ಶಕ್ತರಲ್ಲ. ಮಗುವೇ, ಜ್ಞಾನವಂತರಲ್ಲಿ ನೀನೇ ಶ್ರೇಷ್ಠನು, ಕ್ಷತ್ರಿಯರನ್ನೂ ದುಷ್ಟರನ್ನೂ ನೀನು ನಾಶಮಾಡುವಿ. ನಿನ್ನ ವೈರಿಗಳು ದೀಪದಲ್ಲಿ ಬೀಳುವ ಪತಂಗಗಳಂತೆ ನಾಶಹೊಂದುವರು ಎಂದು ಆಶೀರ್ವಾದಪೂರ್ವಕ ನುಡಿದನು. ನಂತರ ಜಗಜ್ಜನನಿಯಾದ ರೇಣುಕಾದೇವಿಯು ಅತಿ ಪ್ರೇಮದಿಂದ ಶಿವನ ಕೃಪೆಪಡೆದ ರಾಮನನ್ನು ಆಲಂಗಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಎಲೈ ವತ್ಸನೇ ನನ್ನ ಆಶೀರ್ವಾದದಿಂದ ಚಿರಂಜೀವಿಯೂ, ಮಹಾಬಲಶಾಲಿಯೂ, ಪರಮಯೋಗ್ಯವಂತನೂ, ನಿತ್ಯ ಸುಖವಂತನೂ ಆಗು. ಎಲೈ ಮಗುವೇ, ನಿನ್ನಂಥ ಸದ್ಗುಣಸುಂದರ ಪರಾಕ್ರಮಶಾಲಿಯಾದ ಪುತ್ರನು ಯಾವ ಪುಣ್ಯವಂತರಾದ ಮಹಾತ್ಮರಿಗೆ ಜನಿಸುವನೋ ಆ ತಂದೆತಾಯಿಗಳು ಲೋಕದಲ್ಲಿ ಧನ್ಯರಾಗುವರು ಎಂದು ಪ್ರೇಮದಿಂದ ಜನನಿಯು ನುಡಿಯಲು, ರಾಮನು ಹೇ ಜಗತ್ಕರ್ತಳಾದ ದೇವಿಯೇ ನೀನು ನನಗೆ ತಾಯಿಯಾಗಿಯೂ ಶಿವಸ್ವರೂಪಿಯಾದ ಜಮದಗ್ನಿ ಋಷಿಯು ತಂದೆಯಾಗಿಯೂ ಇರುತ್ತಿರಲು ಇಂಥ ಸಾಮರ್ಥ್ಯವನ್ನು ನಾನು ಪಡೆದದ್ದು ಏನೂ ಆಶ್ಚರ್ಯವಲ್ಲ. ನನ್ನ ಸಮಾನ ಧನ್ಯರು ಮೂರು ಲೋಕದಲ್ಲಿ ಯಾರೂ ಇಲ್ಲವು.

---

# ೧೭ನೇ ಅಧ್ಯಾಯ

ಸ್ಕಂದ:—ಮುನಿಗಳೇ, ಪರಶುರಾಮನು ಪುನಃ ಪರಮಾತ್ಮನ ದರ್ಶನಕ್ಕೆ ಹೋಗುವ ಇಚ್ಛೆಯಿಂದ ತಂದೆತಾಯಿಗಳಿಗೆ ನಮಸ್ಕಾರಮಾಡಿ ಅವರನ್ನು ವಿನಯದಿಂದ ಹೀಗೆ ಕೇಳಿದನು:

ರಾಮ:—ಹೇ ಮಾತಾಪಿತರೇ, ನಾನು ಪರಶುವಿದ್ಯೆಯನ್ನು ಸಂಪಾದಿಸಲಿಕ್ಕೆ ವಿಘ್ನೇಶನನ್ನು ಆರಾಧಿಸುವಗೋಸ್ಕರ ಹರನ ದಿವ್ಯಸ್ಥಾನವಾದ ಕೈಲಾಸಕ್ಕೆ ಹೋಗುವೆನೆಂದು ನಮಸ್ಕರಿಸಿ, ಅವರ ಅಪ್ಪಣೆಯನ್ನು ಪಡೆದು ಕೈಲಾಸಕ್ಕೆ ಶೀಘ್ರವಾಗಿ ಹೊರಟುಹೋದನು. ಮತ್ತು ಅಲ್ಲಿ ಹೋಗಿ ಹರನಿಗೆ ಪರಮಾನಂದದಿಂದ ನಮಸ್ಕರಿಸಿ ವಿಘ್ನೇಶನನ್ನು ಮೆಚ್ಚಿಸುವದಕ್ಕೆ ಪಂಚಾಗ್ನಿ ಮಧ್ಯದಲ್ಲಿ ಕಾಲು ಮೇಲುಮಾಡಿ ತಲೆಕೆಳಗಾಗಿ ನಿಂತು ತಪಸ್ಸುಮಾಡುತ್ತ ಶ್ರೀಗಣೇಶನನ್ನು ಅನೇಕ ಪ್ರಕಾರದಿಂದ ಸ್ತುತಿಸಲಿಕ್ಕೆ ಪ್ರಾರಂಭಮಾಡಿದನು.

ಸ್ತೋತ್ರವು:—ವಿಘ್ನೇಶ್ವರಾಯ ವರದಾಯ ಸುರಪ್ರಿಯಾಯ |
ಲಂಬೋದರಾಯ ಸಕಲಾಯ ಜಗದ್ಧಿತಾಯ ||
ಈ ಭಾಗನಾಯ ಶ್ರುತಿಯಜ್ಞ ವಿಭೂಷಿತಾಯ |
ಗೌರೀಸುತಾಯ ಗಣನಾಥ ನಮೋನಮಸ್ತೆ ||
ಭಕ್ತಾರ್ತಿನಾಶನ ಪರಾಯ ಗಣೇಶ್ವರಾಯ |
ಸರ್ವೇಶ್ವರಾಯ ಸುಖದಾಯ ಸುರೇಶ್ವರಾಯ ||
ವಿದ್ಯಾಧರಾಯ ವಿಕಟಾಯ ಚ ವಾಮನಾಯ |
ದೇವಪ್ರಸನ್ನವದನಾಯ ನಮೋನಮಸ್ತೆ ||
ತ್ವಾಂ ದೇವ ವಿಘ್ನದಲನೇತಿ ಚ ಸುಂದರೇತಿ |
ಭಕ್ತಪ್ರಿಯೇತಿ ಸುಖದೇತಿ ಫಲಪ್ರದೇತಿ |
ವಿದ್ಯಾಪ್ರದೇತ್ಯಘ ಹರೇತಿ ಚ ಯೇಸ್ತು ವಂತಿ |
ತೇಭ್ಯೋ ಗಣೇಶ ವರದೋ ಭವ ನಿತ್ಯಮೇವ ||
ಖಂಡ ದ್ವಿಜೇತಿ ವರಸರ್ಪವಿಭೂಷಣೇ ತಿ |
ಭಕ್ತಿ ಪ್ರಿಯೇತಿ ಶಶಿಶೇಖರ ನಂದನೇತಿ |
ಸರ್ವೇಶ್ವರೇತಿ ವಿಮಲೇತಿ ಚಯೇಸ್ತುವಂತಿ |
ತಾನ್ ದೇವ ನಿತ್ಯಮ ಘಹನ್ ಪರಿಪಾಹಿ ಸರ್ವಾನ್ ||

**ಸ್ಕಂದ**:—ಹೇ ಮುನಿಗಳೇ, ಈ ಪ್ರಕಾರ ರಾಮನು ತಪಸ್ಸು ಮಾಡುತ್ತ ವಿಘ್ನೇಶನನ್ನು ಸ್ತುತಿಸಲಾಗಿ, ಅವನ ಅದ್ಭುತ ತಪಸ್ಸಿಗೂ ಮತ್ತು ಅನನ್ಯ ಭಕ್ತಿಗೂ ಗಣನಾಯಕನು ಮೆಚ್ಚಿ ಇಂತೆಂದನು :

**ಗಣೇಶ್ವರ**:—ಎಲೈ ಬ್ರಾಹ್ಮಣಶ್ರೇಷ್ಠನೇ, ನಾನು ನಿನ್ನ ತಪಸ್ಸಿಗೆ ಮೆಚ್ಚಿದೆನು. ಶೀಘ್ರವಾಗಿ ನಿನ್ನ ವಾಂಛಿತವನ್ನು ಬೇಡಿಕೋ ಅದನ್ನು ಈಗಲೇ ಕೊಡುತ್ತೇನೆ. ಮತ್ತು ನೀನು ಜಗತ್ಪರಿಪಾಲಕನಾದ ಹರಿಯು, ಜಗದುದ್ಧಾರಕ್ಕಾಗಿ ಈ ವಿಪ್ರವೇಷವನ್ನು ಧರಿಸಿರುವಿಯೆಂದು ನಾನು ಜ್ಞಾನವೃಷ್ಟಿಯಿಂದ ತಿಳಿದೆನು.

**ರಾಮ**:—ಹೇ ದೇವನೇ, ಪರಮಾತ್ಮನಿಂದ ಧನುರ್ವಿದ್ಯೆಯನ್ನು ನಾನು ಪಡಕೊಂಡೆನು. ಆದರೆ ದಿವ್ಯವಾದ ಪರಶುವಿದ್ಯೆಯನ್ನು ನನಗೆ ನೀನು ದಯಪಾಲಿಸಬೇಕು.

**ಗಣೇಶ್ವರ**:—ಹೇ ರಾಮನೇ, ಈ ದಿವ್ಯಪರಶುವನ್ನು ತೆಗೆದುಕೋ. ಇದನ್ನು ನೀನು ಯಾವ ಶತ್ರುಗಳ ಮೇಲೆ ಪ್ರಯೋಗಿಸುವಿಯೋ ಅವರು ತತ್‌ಕ್ಷಣದಲ್ಲಿಯೇ ನಾಶಹೊಂದುವರು, ಎಂದು ಹೇಳಿ ಗಣೇಶ್ವರನು ರಾಮನಿಗೆ ತನ್ನ ಸ್ವರೂಪವನ್ನು ಕೊಟ್ಟು ದಿವ್ಯವಾದ ಪರಶುವಿದ್ಯೆಯನ್ನು ಉಪದೇಶ ಮಾಡಿದನು. ಲಂಬೋದರರೂಪದಿಂದ ರಾಮನು ಗಣೇಶ್ವರನಿಂದ ಪರಶುವಿದ್ಯಾರಹಸ್ಯವನ್ನು ಕೈಲಾಸದಲ್ಲಿ ಪಡೆದನು.

---

# ೧೮ನೇ ಅಧ್ಯಾಯ

**ಸ್ಕಂದ**:—ಯತಿಗಳೇ, ರಾಮನು ಗಣೇಶ್ವರನಿಂದ ಪರಶುವಿದ್ಯೆಯನ್ನು ಪಡೆದು, ಪರಮೇಶ್ವರನ ಬಳಿಗೆ ಹೋಗಿ ನಮಸ್ಕಾರ ಮಾಡಲಾಗಿ, ಮುಕ್ಕಣ್ಣನು ಹರುಷದಿಂದ ರಾಮನನ್ನು ಆಲಿಂಗಿಸಿ ನಗೆಮುಖದಿಂದ ಹೀಗೆ ಅಂದನು :

**ಈಶ್ವರ**:—ಎಲೈ ರಾಮನೇ ಸಕಲ ಪಾಪಗಳನ್ನು ನಾಶಮಾಡತಕ್ಕಂಥ ಒಂದು ವೃತ್ತಾಂತವನ್ನು ಹೇಳುತ್ತೇನೆ ಕೇಳು. ಅದನ್ನು ಕೇಳುವದರಿಂದಲೇ ನರರು ತಮ್ಮ ತಮ್ಮ ವಾಂಛಿತಾರ್ಥಗಳನ್ನು ಪಡೆಯುವರು. ಮೊದಲು ಒಂದು ಕಾಲದಲ್ಲಿ ಈ ವಿಶ್ವವೆಲ್ಲವು ಭಯಂಕರವಾದ ಅಗ್ನಿಜ್ವಾಲೆಗಳಿಂದ

ವ್ಯಾಪಿಸಲ್ಪಟ್ಟಿತ್ತು. ಆ ಅಗ್ನಿಮಧ್ಯದಲ್ಲಿ ಒಬ್ಬಾನೊಬ್ಬ ಸ್ತ್ರೀಯಳು ಅಗ್ನಿಗೆ ಸಮಾನವಾದ ತೇಜವುಳ್ಳವಳೂ, ಸರ್ವಾಭರಣ ಭೂಷಿತಳೂ, ಅತ್ಯಂತ ಸುಂದರಳೂ ಆಗಿ ಶೋಭಿಸುತ್ತಿದ್ದಳು. ಆಕೆಯನ್ನು ಕಂಡು, ನೀನು ಯಾರು, ಈ ಘೋರತರವಾದ ಅಗ್ನಿಯ ಜ್ವಾಲೆಯ ಮಧ್ಯದಲ್ಲಿ ನೀನು ಏನು ಕಾರಣ ತಪಸ್ಸು ಮಾಡುವಿ, ನಿನ್ನ ಇಚ್ಛೆಯೇನಿರುವದೆಂದು ನಾನು ಅವಳನ್ನು ಕೇಳಿದ ಕೂಡಲೇ ಆ ಭೀಕರವಾದ ಅಗ್ನಿಯು ನನ್ನ ದೇಹದೊಳಗೆ ಅಡಗಿ ಬಿಟ್ಟಿತು. ಆಗ ಪಾರ್ವತಿಗೆ ಸಮಾನಳಾದ ಆ ಕಮಲಲೋಚನೆಯು ಅತ್ಯಂತ ಆಶ್ಚರ್ಯಭರಿತಳಾಗಿ ಮುಗುಳುನಗೆಯಿಂದ ಇಂತೆಂದಳು.

**ಸ್ತ್ರೀಯು**:—ಎಲೈ ಸರ್ವಾಂತರ್ಯಾಮಿಯಾದ ದೇವನೇ, ನಿನ್ನ ಮಹಿಮೆಯು ಅಗಾಧವಾದದ್ದು. ಸ್ಥಾವರ ಜಂಗಮ ಸಕಲ ಜಗತ್ತನ್ನು ನಾಶಮಾಡುವ ಭೀಕರವಾದ ಅಗ್ನಿಯನ್ನು ನೀನು ಈ ಕ್ಷಣಮಾತ್ರದಿಂದ ಭಕ್ಷಿಸಿದಿ. ಆದ್ದರಿಂದ ಜಮದಗ್ನಿಯೆಂಬ ಹೆಸರಿನಿಂದ ನೀನು ಅವತರಿಸುವಿ. ನಿನಗೋಸ್ಕರವಾಗಿಯೇ ನಾನು ಈ ಘೋರ ತಪಸ್ಸನ್ನು ಆಚರಿಸಿದೆನು. ಆ ತಪಸ್ಸಿನಿಂದುಂಟಾದ ಜ್ವಾಲೆಯು ನಿನ್ನ ಉದರವನ್ನು ಪ್ರವೇಶಮಾಡಿತು. ಆದ್ದರಿಂದ ಮಹಾಪ್ರಭುವೇ, ನೀನು ನನ್ನನ್ನು ಜ್ಞಾನದೃಷ್ಟಿಯಿಂದ ತಿಳಿದು ಶೀಘ್ರವಾಗಿ ನನಗೆ ಪತಿಯಾಗಬೇಕೆಂದು ಬೇಡಿಕೊಂಡಳು. ಹೇ ರಾಮನೇ ಆಗ ನಾನು ಅವಳಿಗೆ ಎಲೈ ಸುಂದರಿಯೇ ನಿನ್ನ ತಂದೆಯು ಸ್ವಯಂವರದಲ್ಲಿ ನಿನ್ನನು ನನಗೆ ಕೊಡುವನು, ಆಗ ನಾನು ನಿನ್ನನ್ನು ಗ್ರಹಿಸುವೆನು. ಹಿಮವದ್ರಾಜನು ರೇಣುಕನೆಂಬುವ ಹೆಸರಿನಿಂದ ಭೂಮಿಯಲ್ಲಿ ಜನಿಸುವನು. ಮತ್ತು ನನಗೋಸ್ಕರ ಯಜ್ಞವನ್ನು ಮಾಡುವನು- ಆ ಯಜ್ಞದ ಅಗ್ನಿಕುಂಡದಿಂದ ನೀನು ನನ್ನನ್ನು ವರಿಸುವದಕ್ಕೆ ಸರ್ವಾಭರಣಭೂಷಿತಳಾಗಿ ಜನಿಸುವಿ. ನಾನು ಪುಣ್ಯಸ್ಥಾನವಾದ ಗಂಗಾತಟದಲ್ಲಿ ಭೃಗುವಂಶದ ಋಚೀಕನೆಂಬ ಯೋಗಿಯ ಪುಣ್ಯಗೃಹದೊಳಗೆ ಜಮದಗ್ನಿಯೆಂಬ ಹೆಸರಿನಿಂದ ಜನಿಸುವೆನು. ಎಂದು ಹೇಳಲು, ಆ ಪುಣ್ಯರೂಪಳು ಅಲ್ಲಿಯೇ ಅಂತರ್ಧಾನವಾದಳು. ಅವಳ ಕಥಾಶ್ರವಣಮಾತ್ರದಿಂದಲೇ, ನರರು ಸರ್ವಪಾಪಗಳಿಂದ ಮುಕ್ತರಾಗುತ್ತಾರೆ ಆ ದಿವ್ಯ ಸ್ತ್ರೀಯಳೇ ನಿನ್ನ ತಾಯಿಯಾದ ರೇಣುಕಾದೇವಿಯು. ಆ ಋಚೀಕ ಮುನಿಯ ಪುತ್ರನೇ ನಿನ್ನ ತಂದೆಯಾದ ಜಮದಗ್ನಿಯು. ವಸುಯೆಂಬ ಹೆಸರಿನಿಂದ ಅಗ್ನಿಯು, ಬೃಹ

ಸ್ಕಣ್ವನೆಂಬ ಹೆಸರಿನಿಂದ ಇಂದ್ರನು, ಬ್ರಹದ್ಭಾನುವೆಂಬ ಹೆಸರಿನಿಂದ ಸೂರ್ಯನು, ಪಿತ್ವಾನನುವೆಂಬ ಹೆಸರಿನಿಂದ ವಾಯುವು ನಿನ್ನ ಬಂಧುಗಳು. ಇವರೆಲ್ಲರು ಶೂರರೂ, ಸಕಲ ಶಾಸ್ತ್ರ ಪಾರಂಗತರೂ, ವೇದಜ್ಞರೂ ಇದ್ದಾರೆ. ಹೇ ರಾಮನೇ, ಐದನೆಯವನಾದ ನೀನು ನಿತ್ಯನು, ಪರಾತ್ಪರನು. ಏಕನ , ಜಗತ್ಕರ್ತನು, ಪುರುಷನು, ಅನಂತನು, ಶಾಶ್ವತನು, ಜೀವಾತ್ಮನು, ಕ್ಷತ್ರಿಯಾಂತಕನೆಂದು ನಾರದನ ಮುಖದಿಂದ ಕೃತಯುಗದ ಪ್ರಾರಂಭ ದಲ್ಲಿಯೇ ನಾನು ಕೇಳಿದ್ದೇನೆ.

**ರಾಮ:**—ಎಲೈ ಸರ್ವೇಶ್ವರನೇ ನೀನು ಸಾಕ್ಷಾತ್ ವಿಷ್ಣುವೆಂದು ನನ್ನನ್ನು ಯಾಕೆ ಮೋಹಪಡಿಸುತ್ತೀ?' ನಾನು ಆತ್ಮನನ್ನು ತಿಳಿದು ಅವಿದ್ಯೆಯನ್ನು ಗೆದ್ದವನಲ್ಲ. ನಿನ್ನ ಕೃಪೆಯನ್ನು ಪಡೆದು ಧನ್ಯನಾಗಬೇಕೆಂದು ನಿನ್ನ ಪಾದ ವನ್ನು ಹೊಂದಿದ್ದೇನೆ.

**ಸ್ಕಂದ:**—ಹೀಗೆ ರಾಮನೂ, ಶಂಕರನೂ, ವಿನೋದದಿಂದ ಮಾತಾಡುತ್ತಿರು ವಾಗ, ತ್ರಿಲೋಕಸಂಚಾರಿಯಾದ ನಾರದಮುನಿಯು ಕೈಲಾಸಕ್ಕೆ ಬಂದು ರಾಮ ಶಂಕರರಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ವಿನಯದಿಂದ ಹೀಗೆ ಅಂದನು.

**ನಾರದ:**—ಬಹುಜನ್ಮದೊಳಗೆ ಮಾಡಿದ ಸುಕೃತಬಲದಿಂದ ರಾಮ ಶಂಕರರ ದರ್ಶನದ ಲಾಭವು ನನಗೆ ಘಟಿಸಿತು. ಇಂದು ನಾನು ಧನ್ಯನಾದೆನು. ಯಾಕಂದರೆ ಘೋರ ತಪದಿಂದಲಾದರೂ ಬ್ರಹ್ಮಾದಿಗಳಿಗೆ ಸುದ್ಧಾ ಈ ಮಹಾಪುರುಷರ ದರ್ಶನವು ದುರ್ಲಭವು.

---

## ೧೯ನೇ ಅಧ್ಯಾಯ

**ಈಶ್ವರ:**—ಹೇ ಜ್ಞಾನಿಗಳಲ್ಲಿ ಶ್ರೇಷ್ಠನಾದ ನಾರದನೇ, ಯಾವ ಸ್ಥಾನದಿಂದ ಬರುವಂಥವನಾದಿ ? ಯಾ ವ ಯಾವ ಲೋಕದಲ್ಲಿ ಏನೇನು ವಿಶೇಷವಿರು ವದು, ಶೀಘ್ರವಾಗಿ ಕಥನಮಾಡು.

**ನಾರದ:**—ಹೇ ಮಹಾದೇವನೇ, ಪುಣ್ಯಮೂರ್ತಿಯಾದ ಜಮದಗ್ನಿ ಋಷಿಯ ಆಶ್ರಮದಿಂದ ಬಂದೆನು. ಆ ಋಷಿಯ ಧರ್ಮಪತ್ನಿಯಾದ ರೇಣುಕಾ

ದೇವಿಯು ಸ್ವತಃ ಕಾಮಧೇನುವಿನಂತೆ ಎಂಭತ್ತೆಂಟು ಸಾವಿರ ಮಹಾಂತರಾದ ಮುನಿಗಳಿಗೂ, ಯಕ್ಷಗಂಧರ್ವಸಿದ್ಧಚಾರಣರಿಗೂ, ಬಂದಂಥ ಅತಿಥಿಗಳಿಗೂ ಆದರಪೂರ್ವಕವಾಗಿ ಭಕ್ಷ್ಯ ಭೋಜ್ಯ ಲೇಹ್ಯ, ಚೋಹ್ಯ, ಮೊದಲಾದ ಷಡ್ರಸಾನ್ನವನ್ನು ಸದಾಕಾಲವೀಯುತ್ತಾ, ಸರ್ವರನ್ನು ಪರಮಾನಂದಪಡಿಸುತ್ತಾಳೆ. ಹರನೇ ಆ ಮಹಾತ್ಮನ ಅಗ್ನಿಹೋತ್ರಶಾಲೆಯು ಅನೇಕ ದೇವಋಷಿಗಳು ಉಚ್ಚರಿಸುವ ಋಗ್‌ಯಜುಸ್ಸಾಮವೇದ ಮಂತ್ರಗಳ ಘೋಷದಿಂದಲೂ ಮತ್ತು ಹೋಮಧೂಮದಿಂದಲೂ ಅನೇಕ ತಾಪಸರಿಂದಲೂ ಅತ್ಯಂತ ಶೋಭಾಯಮಾನವಾಗಿರುತ್ತದೆ. ಮತ್ತು ಆ ಋಷಿಯು ಆಶ್ರಮವು ನಾನಾವಿಧವಾದ ಗಿಡಬಳ್ಳಿಗಳಿಂದಲೂ, ಸ್ವಾದವಾದ ಫಲಮೂಲಗಳಿಂದಲೂ, ಸದ್ಗಂಧಯುಕ್ತವಾದ ಕುಸುಮಗಳಿಂದಲೂ, ಯಜ್ಞಮಂಟಪಗಳಿಂದಲೂ, ನಾನಾ ಜಾತಿಯ ಮೃಗಪಕ್ಷಿಗಳಿಂದಲೂ, ಅಲ್ಲಲ್ಲಿ ವೇದಾಧ್ಯಯನ ದೇವತಾರ್ಚನ ಸ್ತವನಮಾಡುವ ಋಷಿಗಳಿಂದೂ ಶೋಭಾಯಮಾನವಾಗಿರುತ್ತದೆ. ಮತ್ತು ಆ ಜಮದಗ್ನಿಯ ಆಶ್ರಮದಲ್ಲಿ ಕಾಲಕಾಲಕ್ಕೆ ತಕ್ಕಷ್ಟು ಮಳೆಯು ಸುರಿಯುವದು. ನಾನಾಪ್ರಕಾರದ ಸಸ್ಯಗಳು ಅತ್ಯಂತ ಫಲವತ್ತಾಗಿ ಬೆಳೆಯುವವು. ಮಂದಮಾರುತವು ಸುಖಕರವಾಗಿ ಬೀಸುತ್ತಿರುವದು. ರೋಗದುಃಖಾದಿಗಳು ಪುಣ್ಯಾಶ್ರಮದ ಸೀಮೆಯನ್ನು ಮುಟ್ಟವು. ಸುರ ಸಿದ್ಧ ಗಂಧರ್ವ ವಿದ್ಯಾಧರಮುನಿಗಳಿಂದ ಪೂಜಿಸಲ್ಪಟ್ಟ ಕಾಮಧೇನುವು ಅವರವರ ಇಷ್ಟಿತಾರ್ಥಗಳನ್ನು ಪ್ರದಾನಮಾಡುವದು. ಮತ್ತು ಆ ತಪೋವನದಲ್ಲಿ ಕಲ್ಪವೃಕ್ಷ ಚಿಂತಾಮಣಿ ಕಾಮಲತೆ ಮೊದಲಾದವುಗಳು ಜಮದಗ್ನಿ-ರೇಣುಕಾದೇವಿಯರ ಪ್ರಭಾವದಿಂದ ಅಲ್ಲಿರುವವರಿಗೆ ಬೇಡಿದ ಪದಾರ್ಥಗಳನ್ನು ಕೊಡುವದರಿಂದ ಸರ್ವಪ್ರಾಣಿಗಳೂ ಪರಮಾನಂದದಿಂದಿದ್ದಾರೆ.

**ಈಶ್ವರ:**—ಎಲೈ ನಾರದನೇ, ಆ ಜಮದಗ್ನಿ-ರೇಣುಕಾದೇವಿಯರ ಪೂರ್ವ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಮೊದಲು ಕೃತಯುಗದಲ್ಲಿ ದೈತ್ಯ ದಾನವ ರಾಕ್ಷಸರು ಸರ್ವ ದೇವತೆಗಳನ್ನು ಯುದ್ಧದಲ್ಲಿ ಗೆದ್ದು ಸ್ವರ್ಗಾದಿ ಪದವಿಗಳಿಂದ ಹೊರಗೆ ಹಾಕಿದರು. ಆಗ ದೇವತೆಗಳೂ ಮಹರ್ಷಿಗಳೂ ಅತ್ಯಂತ ದುಃಖದಿಂದ ನನಗೆ ಶರಣುಬಂದರು. ಆಗ ನಾನು ಅವರಿಗೆ ಅಭಯಕೊಟ್ಟು ಹರಿಯನ್ನು ಸ್ಮರಣೆಮಾಡಿದೆನು. ಕೂಡಲೇ ನಾರಾಯ

ಣನು ಬಂದು ತನ್ನನ್ನು ಸ್ಮರಣೆಮಾಡಿದ ಕಾರಣವೇನೆಂದು ಕೇಳಲು, ನಾನು ಅವನಿಗೆ ಎಲೈ ಹರಿಯೇ, ದೈತ್ಯರು ದೇವತೆಗಳಿಗೂ ಋಷಿಗಳಿಗೂ ಬಹಳ ತಾಪಕೊಟ್ಟು ಪೀಡಿಸುತ್ತಾರೆ. ಆದ ಕಾರಣ ನೀನು ಭೂಮಿಯಲ್ಲಿ ರಾಮನೆಂಬ ಹೆಸರಿನಿಂದ ಹುಟ್ಟಿ ಆ ದುಷ್ಟರನ್ನು ಸಂಹರಿಸು ಎಂದು ಹೇಳಲು, ತಥಾಸ್ತು ಎಂದು ಹೊರಟುಹೋದನು. ಮುನಿಯೇ ನೋಡು, ಈ ರಾಮನೇ ಆ ನಾರಾಯಣನು. ಅಸುರರ ಸಂಹಾರಕ್ಕಾಗಿ ನಾಲ್ಕು ಮಂದಿ ಅಣ್ಣಂದಿರೊಡನೆ ಆ ಪುಣ್ಯಶಾಲಿಯಾದ ರೇಣುಕಾದೇವಿಯ ಉದರದಿಂದ ಜನಿಸಿದ್ದಾನೆ.

**ನಾರದ:**—ಎಲೈ ಶಂಕರನೇ, ಮಹಾ ಮಾಯಾವಿಯಾದಂಥ ವಿಷ್ಣುವೇ ಈ ರಾಮರೂಪದಿಂದ ಜನಿಸಿದ್ದನ್ನು ನಾನು ಚರ್ಮಚಕ್ಷುವಿನಿಂದ ಹೇಗೆ ತಿಳಿದೇನು? ಈತನು ಸರ್ವರ, ಆತ್ಮಸ್ವರೂಪನಾಗಿದ್ದರೂ ಅಗೋಚರನಾಗಿದ್ದಾನೆ. ಶುದ್ಧಾಂತಃಕರಣರಾದ ಯೋಗಿಗಳಿಂದ ಅರಿಯಲ್ಪಡತಕ್ಕ ಮೂರ್ತಿಯನ್ನು ನಾನು ಹೇಗೆ ಅಶುದ್ಧಮನಸ್ಸಿನಿಂದ ತಿಳಿಯುವೆನು?

**ರಾಮ:**—ಎಲೈ ಸರ್ವಜ್ಞನಾದ ಮುನಿಯೇ, ಸುಮ್ಮನೆ ನನ್ನನ್ನು ಈ ಪ್ರಕಾರ ಸ್ತುತಿಸಿ ಮೋಹಪಡಿಸುತ್ತೀ. ನಾನು ವಿಷ್ಣುವಲ್ಲ, ನಾನು ಬ್ರಹ್ಮಚಾರಿ ಬ್ರಾಹ್ಮಣನು.

---

## ೨೦ನೇ ಅಧ್ಯಾಯ

**ಸ್ಕಂದ:**—ಯತಿಗಳೇ, ಭಗವಾನ್ ನಾರದಮುನಿಯು ರಾಮನನ್ನು ಸ್ತುತಿಸಿ ಭಕ್ತಿಯಿಂದ ನಮಸ್ಕಾರಮಾಡಿ ಹೊರಟುಹೋದನು. ಇತ್ತಕಡೆಗೆ ಮನ್ಮಥರೂಪನಾದ ವೈಶ್ರವಣನೆಂಬ ಗಂಧರ್ವನು ಅತ್ಯಂತ ಸುಂದರಿಯರಾದ ತನ್ನ ಯುವತಿಯರೊಡನೆ ದಿವ್ಯವಿಮಾನವನ್ನೇರಿಕೊಂಡು ಕ್ರೀಡಾರ್ಥವಾಗಿ ಪೃಥ್ವಿಯಲ್ಲಿ ಚಲಿಸುತ್ತಿರುವಾಗ ರಮ್ಯವಾದ ಗಂಗಾನದಿಯನ್ನು ನೋಡಿದನು. ಅದರ ತೀರವು ನಾನಾಪ್ರಕಾರದ ವೃಕ್ಷಲತಾದಿಗಳಿಂದಲೂ ಮೃಗಪಕ್ಷಿಗಳಿಂದಲೂ, ತಾಪಸರಿಂದಲೂ ಮನೋಹರವಾಗಿ ಶೋಭಿಸುತ್ತಿತ್ತು. ಆಗ ಅವನು ಪುಷ್ಪಕವಿಮಾನದಿಂದಿಳಿದು ತನ್ನ ಸ್ತ್ರೀಯರನ್ನು

ಕೂಡಿಕೊಂಡು ಭಾಗೀರಥೀಯಲ್ಲಿ ಜಲಕ್ರೀಡೆಯನ್ನು ಪ್ರಾರಂಭಿಸಿದನು. ಆಗ ಕೆಲವು ಸುಂದರ ತರುಣ ಯುವತಿಯರು ಸುಸ್ವರದಿಂದ ಮನೋಹರವಾಗಿ ಗಾಯನಮಾಡುತ್ತಿದ್ದರು. ಕೆಲವರು ಪಾಪಹಾರಕವಾದ ಆ ಭಾಗೀರಥೀ ಜಲವನ್ನು ಅವನ ಮೇಲೆ ಚಿಮ್ಮುತ್ತಿದ್ದರು. ಕೆಲವರು ಕರ್ಪೂರಚಂದನದಿಂದ ಮಿಶ್ರವಾದ ಸದ್ಗಂಧ ಜಲವನ್ನು ಅವನ ಮೇಲೆ ಚಿಮುಕಿಸುತ್ತಿದ್ದರು. ಕೆಲವರು ಕೊಳಲು ವೀಣಾ ಮೊದಲಾದ ವಾದ್ಯಗಳಿಂದ ಅತನನ್ನು ಸಂತೋಷಪಡಿಸುತ್ತಿದ್ದರು. ಕೆಲವರು ಸರ್ವ ವಸ್ತ್ರಾಭರಣಭೂಷಿತರಾಗಿ ಅವನ ಮುಂದೆ ನರ್ತಿಸುತ್ತಿದ್ದರು. ಕೆಲವರು ಜಲದೊಳಗೆ ನಗ್ನಶರೀರರಾಗಿ ಅವನಿಗೆ ಆಲಿಂಗನಕೊಡುತ್ತಿದ್ದರು. ಹೀಗೆ ಪರಮಾನಂದದಿಂದ ಜಲಕ್ರೀಡೆಯನ್ನು ಆಡುತ್ತಾ, ಆ ಕುಬೇರನು ಹೀಗೆ ಅಂದನು.

**ಕುಬೇರ:**— ಈ ಸಿದ್ಧಗಂಧರ್ವರಿಂದ ಸೇವಿಸಲ್ಪಡುವ ಭಾಗೀರಥೀ ನದಿಯು ಕ್ರೀಡಾರ್ಥವಾಗಿ ಪೂರ್ವದಲ್ಲಿ ಹರಿಯಿಂದ ನಿರ್ಮಿಸಲ್ಪಟ್ಟಿರುತ್ತದೆ. ಇದರಲ್ಲಿ ಯಾರು ತಮ್ಮ ಸ್ತ್ರೀಯರೊಡನೆ ಜಲಕ್ರೀಡೆಯನ್ನು ಮಾಡುವರೋ ಅವರೇ ಧನ್ಯರು, ಮಹಾತ್ಮರು, ಪಾಪರಹಿತರು ಸುರೂಪಿಗಳು.

**ದೇವಸ್ತ್ರೀಯರು:**— ಹೇ ಸ್ವಾಮಿಯೇ, ಎಲ್ಲಿಂದಲೋ ದೇವದುಂದುಭಿಗಳ ಧ್ವನಿಯೂ ಮತ್ತು ವೀಣಾ ತಾಳ ಮೊದಲಾದವುಗಳ ಧ್ವನಿಯೂ ಮತ್ತು ಭೂಷಣಗಳ ಶಬ್ದವೂ ಕೇಳಿಬರುತ್ತದೆ ಮತ್ತು ಆ ರತ್ನಾಭರಣಗಳ ಕಾಂತಿಯಿಂದ ಸೂರ್ಯನು ನಿಸ್ತೇಜನಾದಂತೆ ತೋರುತ್ತದೆ. ಈ ಪ್ರಕಾಶವೂ ಈ ಧ್ವನಿಯೂ ಎಲ್ಲಿಯದು?

**ಕುಬೇರ:**— ಈ ಮನೋಹರವಾದ ಮೃದಂಗವೀಣಾಭೂಷಣಾದಿಗಳ ಧ್ವನಿಯು ಹರಿಹರ ಸಮ್ಬಂಧದ್ದಾಗಿರುತ್ತದೆ. ಜಡೆಯಲ್ಲಿ ಕಿರುಗಂಟುಗಳನ್ನು ಧರಿಸಿ ಶೂಲಧಾರಿಯಾದ ಹರನು ರುಂಡಮಾಲಾ, ಸರ್ಪಾಭರಣದಿಂದೊಡಗೂಡಿ ಇಲ್ಲಿಗೆ ಬರುವನು. ಮತ್ತು ಹರಿಯೂ ಬರುವನು. ಯಾಕೆಂದರೆ ಇದು ಪುಣ್ಯಕಾರಕವಾದ ಅವರ ವಿಹಾರಸ್ಥಾನವಾಗಿರುತ್ತದೆ.

**ಸ್ಕಂದ:**— ಈ ಪ್ರಕಾರ ಕುಬೇರನು ಹೇಳಲಾಗಿ ಅವನ ಸ್ತ್ರೀಯರು ಆಶ್ಚರ್ಯದಿಂದ ಸುತ್ತುಕಡೆಗೂ ನೋಡುತ್ತಾ ನಿಂತರು.

---

## ೨೧ನೇ ಅಧ್ಯಾಯ

**ಸ್ಕಂದ:**—ಋಷಿಗಳೇ, ರಾಮನು ಕೈಲಾಸಕ್ಕೆ ಹೋಗಲಾಗಿ ಜಮದಗ್ನಿ ಋಷಿಯ ಆಶ್ರಮದಲ್ಲಿ ಅತ್ಯದ್ಭುತ ಕೌತುಕವು ಸಂಭವಿಸುವಂಥಾದ್ದಾಯಿತು.

**ಋಷಿಗಳು:**—ಹೇ ಪ್ರಭುವೇ, ಅಸಂಭವಿಸಿದ ಕೌತುಕವು ಏನು, ಅದನ್ನು ವಿಸ್ತಾರವಾಗಿ ಹೇಳಬೇಕು. ರೇಣುಕಾದೇವಿಯ ಕಥಾಮೃತವನ್ನು ಶ್ರವಣ ಮಾಡುವದು ನಮಗೆ ಅತ್ಯಂತ ಸುಖಕಾರಕವಾಗಿದೆ.

**ಸ್ಕಂದ:**—ರಾಮನು ಕೈಲಾಸಕ್ಕೆ ಹೋದ ಕೆಲವು ಕಾಲದ ಮೇಲೆ, ಒಂದಾನೊಂದು ದಿವಸ ರೇಣುಕಾದೇವಿಯು ರಜಸ್ವಲೆಯಾಗಿ ನಾಲ್ಕನೇ ದಿವಸ ಕೆಲವು ಸ್ತ್ರೀಯರೊಡನೆ ಗಂಗಾಸ್ನಾನಕ್ಕೆ ಹೋದಳು. ಅಲ್ಲಿ ಚಿತ್ರರಥನೆಂಬ ಗಂಧರ್ವನು ನೂರಾರು ವಸ್ತ್ರಾಭರಣಗಳಿಂದ ಶೋಭಿತರಾದ ಸುಂದರ ಯುವತಿಯರಿಂದ ಕೂಡಿಕೊಂಡು ಜಲಕ್ರೀಡೆಯಾಡುವದನ್ನು ಕಂಡು, ರೇಣುಕಾದೇವಿಯು ತನ್ನ ಪ್ರಿಯ ಪತಿಯಾದ ಜಮದಗ್ನಿ ಋಷೀಶ್ವರನು ಇಲ್ಲಿ ಇದ್ದರೆ, ನಾವೂ ಇವರಂತೆ ಸರ್ವಸ್ತ್ರೀಯರನ್ನು ಕೂಡಿಕೊಂಡು ಜಲಕ್ರೀಡೆಯನ್ನಾಡಿ ತೀರ್ಥವನ್ನು ಸಾರ್ಥಕಮಾಡುತ್ತಿದ್ದೆವು ಎಂದು ಮನಸ್ಸಿನಲ್ಲಿ ಅನ್ನುತ್ತಾ ಸ್ನಾನಮಾಡಿ ಮಡಿಯನ್ನುಟ್ಟು ಆಭರಣಗಳನ್ನಿಟ್ಟುಕೊಂಡು, ಸ್ತ್ರೀಯರೊಡನೆ ಹೊತ್ತಾಯಿತೆಂದು ತಿಳಿದು ಭೀತಿಯಿಂದ ಶೀಘ್ರವಾಗಿ ಆಶ್ರಮಕ್ಕೆ ಬಂದಳು. ಆದರೂ ಜಲಕ್ರೀಡೆಯನ್ನು ನೋಡುತ್ತ ನಿಂತದ್ದರಿಂದ ಸ್ವಲ್ಪ ತಡವಾಯಿತು. ಆಗ ಜಮದಗ್ನಿಯು ರೇಣುಕಾದೇವಿಯನ್ನು ನೋಡಿ ಪ್ರಳಯಾಗ್ನಿಯಂತೆ ಅತ್ಯಂತ ಕೋಪವುಳ್ಳವನಾಗಿ ಹೀಗೆ ಅಂದನು.

**ಜಮದಗ್ನಿ:**—ಹೇ ದುಷ್ಟೇ, ಪಾಪಿಯೇ, ಸ್ವೇಚ್ಛಾನುಸಾರವರ್ತಿಸುವವಳೇ ಶೀಘ್ರದಿಂದ ಆಶ್ರಮ ಬಿಟ್ಟು ಹೊರಬೀಳು, ಅಗ್ನಿಹೋತ್ರದ ಕಾಲವು ಮೀರಿಹೋಯಿತು. ದೇವತಾ ಅತಿಥಿಗಳ ಪೂಜೆಯು ನಿಷ್ಫಲವಾಯಿತು. ನೀನು ವ್ಯಭಿಚಾರಿಣಿಯು, ಧರ್ಮಪತ್ನಿಯಾಗಲಿಕ್ಕೆ ಯೋಗ್ಯಳಲ್ಲ. ನಿನ್ನ ಮುಖಾವಲೋಕನವು ಪಾಪಕರವಾದದ್ದು. ತ್ವರಿತದಿಂದ ಹೊರಟು ಹೋಗು.

**ಸ್ಕಂದ**:—ಈ ಪ್ರಕಾರ ಜಮದಗ್ನಿ ಋಷಿಯು ಕೋಪದಿಂದ ನುಡಿಯಲು, ಮಹಾಪತಿವ್ರತೆಯಾದ ರೇಣುಕಾದೇವಿಯು ಭೀತಿಯಿಂದ, ಮಧುರವಾಣಿಯಿಂದ ಕೈಮುಗಿದು ಹೀಗೆ ಅಂದಳು :

**ರೇಣುಕಾ**:—ಹೇ ಪ್ರಭುವೇ, ನಿನ್ನವ್ಯತಿರಿಕ್ತ ಈ ಜಗತ್ತಿನಲ್ಲಿ ಅನ್ಯವನ್ನು ಮನಸ್ಸಿನಲ್ಲಿ ಸಹ ನಾನು ಸ್ಮರಿಸೆನು. ನಾರಾಯಣನು ನನಗೆ ಮಗನು. ಬ್ರಹ್ಮನು ಮೊಮ್ಮಗನು. ಅನ್ಯಜಂತುಗಳೆಲ್ಲ ಮರಿಮಕ್ಕಳು. ಆದ್ದರಿಂದ ನೀನೇ ನನ್ನ ಮನಸ್ಸಿನ ವಿಷಯವು. ಅಲ್ಲದೆ ಪತಿವ್ರತಾಸ್ತ್ರೀಯರಿಗೆ ಪತಿಯೇ ಪರಮಗುರು. ಪತಿಯನ್ನು ಬಿಟ್ಟು ಅನ್ಯಗತಿ ಇಲ್ಲ. ಪತಿಯೇ ಪರದೇವತೆಯು. ಪತಿಯು ಸಂತುಷ್ಟನಾದರೆ ಪಿತೃಗಳೂ, ದೇವತೆಗಳೂ ಸಂತುಷ್ಟರಾಗುವರು. ಸತಿಯರಿಗೆ ಪತಿಯೇ ಭೂಷಣವಲ್ಲದೆ, ಭೂಷಣಗಳು ಭೂಷಣವಲ್ಲ. ಸ್ವಾಮಿಯೇ, ಸ್ವಪ್ನದಲ್ಲಾದರೂ ನಿನ್ನನ್ನು ಬಿಟ್ಟು ಅನ್ಯವನ್ನು ನೆನೆದವಳಲ್ಲ. ನೀನೇ ನನಗೆ ಪರಮಪ್ರೀತಿಯ ವಸ್ತುವಾಗಿರುವೆ, ಸತ್ಯವಾಗಿ ಪ್ರತಿಜ್ಞೆಮಾಡಿ ಹೇಳುತ್ತೇನೆ. ಇನ್ನು ಮೇಲೆ ಧರ್ಮದಿಂದ ನಿನ್ನ ಮನಸ್ಸಿಗೆ ಬಂದಂತೆ ಮಾಡಬೇಕು.

---

# ೨೨ನೇ ಅಧ್ಯಾಯ

**ಸ್ಕಂದ**:—ಯತಿಗಳೇ, ಈ ಪ್ರಕಾರ ಪತಿವ್ರತಾಶಿರೋಮಣಿಯಾದ ರೇಣುಕಾದೇವಿಯು ಧರ್ಮಯುಕ್ತವಾದ ವಿನಯವಚನದಿಂದ ಬೇಡಿಕೊಂಡರೂ ಜಮದಗ್ನಿಯು ಶಾಂತನಾಗದೆ ಮತ್ತಷ್ಟು ಕೋಪಗೊಂಡು ಹೀಗೆಂದನು.

**ಜಮದಗ್ನಿ**:—ಹೇ ನೀಚಳೇ, ನೀನು ನಿಸ್ಸಂದೇಹವಾಗಿ ವಧಿಸಲಿಕ್ಕೆ ಯೋಗ್ಯಳಿದ್ದೀ. ನಿಂದಿತಕಾರ್ಯವನ್ನು ಮಾಡಿ ಧರ್ಮವಚನವನ್ನು ಏನು ನುಡಿಯುತ್ತೀಯೆಂದು ಜಮದಗ್ನಿಯು ಮಹಾಕ್ರೋಧದಿಂದ ರೇಣುಕಾದೇವಿಯನ್ನು ವಧಮಾಡಲಿಕ್ಕೆ ಹಿರಿಯ ಮಗನಿಗೆ ಎಲೈ ಮಗನೇ, ಈ ವ್ಯಭಿಚಾರಿಣಿಯಾದ ರೇಣುಕೆಯನ್ನು ನನ್ನ ವಚನದಂತೆ ಛೇದಿಸು. ಇವಳು ದುಶ್ಚಾರಿಣಿಯೂ, ದುಷ್ಟಳೂ, ಕುಲಧರ್ಮಬಹಿಷ್ಕೃತಳೂ ಇದ್ದದರಿಂದ ಸ್ವತಃ ನನ್ನ ಕರದಿಂದ ಛೇದಿಸಲಿಕ್ಕೆ ಯೋಗ್ಯಳಲ್ಲ.

**ವಸು**:—ಹೇ ತಂದೆಯೇ, ಈ ನಿನ್ನ ವಚನವು ಪಾಪಕಾರಕವಾದದ್ದು, ಅಧರ್ಮವಾದದ್ದು, ನರಕಸಾಧನವಾದದ್ದು ಇರುವುದರಿಂದ ನಾನು ಜನನಿಯನ್ನು ವಧಿಸುವದಿಲ್ಲ. ಲೋಕದಲ್ಲಿ ಸುತರಿಗೆ ತಾಯಿತಂದೆಗಳೇ ಇಹಪರ ಸುಖಗಳನ್ನು ಕೊಡುವ ಸಾಕ್ಷಾತ್ ತೀರ್ಥಸ್ವರೂಪರು. ತಾಯಿತಂದೆಗಳಂತೆ ಸುಖದಾತರು ಮೂರುಲೋಕದಲ್ಲಿಯೂ ಇಲ್ಲ. ತಾಯಿಯು ಪುತ್ರನನ್ನು ತನ್ನೊಡಲೊಳಗೆ ಧರಿಸಿ ಅನೇಕ ದುಃಖಪಟ್ಟು, ಹಡೆದು, ಪರಿಪರಿಯಿಂದ ಪರಿಪಾಲನೆ ಮಾಡಿದ್ದಾಳೆ. ಇಂಥ ತಾಯಿಯನ್ನು ಸಂಹರಿಸುವದು ಪುತ್ರನಿಗೆ ಧರ್ಮವಾಗುವದೇ ? ದುಷ್ಟತಾಯಿಯಾದರೂ ಸಹ ಮಗನಿಂದ ವಧಿಸಲಿಕ್ಕೆ ಯೋಗ್ಯಳಲ್ಲ. ಸಾಮಾನ್ಯವಾಗಿ ಸ್ತ್ರೀಹತವು ಪಾಪಕರವಾದದ್ದೆಂದು ಹೇಳುತ್ತಿರಲು, ಸಾಕ್ಷಾತ್ ಜನನಿಯನ್ನು ಕೊಲ್ಲುವದು ಅಧರ್ಮವು. ಇನ್ನು ನನ್ನ ತಾಯಿಯಾದ ರೇಣುಕಾದೇವಿಯು ಪರಮಸಾಧ್ವಿಯು, ನಿರ್ಮಲಳು, ಸದ್ಗುಣಗಳ ಖಣಿ, ಲೋಕಮಾನ್ಯಳು, ಧರ್ಮಮೂರ್ತಿಯು, ಇಂಥವಳನ್ನು ವಧಿಸುವದು ನನ್ನಿಂದ ಸರ್ವಥಾ ಸಂಭವಿಸದು.

**ಸ್ಕಂದ**:—ಮುನಿಗಳೇ, ವಸುವೆಂಬ ಮಗನು ಹೀಗೆ ತಾಯಿಯನ್ನು ವಧಿಸುವದಿಲ್ಲವೆಂದು ಹೇಳಲು ಜಮದಗ್ನಿಯು ಅತ್ಯಂತ ಕೋಪದಿಂದ ವಸುವಿಗೆ ಹೀಗೆ ಅಂದನು.

**ಜಮದಗ್ನಿ**:—ಎಲೈ ನೀಚನೆ, ಸತ್ಪುತ್ರನಿಗೆ ತಂದೆಯೇ ಮಾನ್ಯನು, ತಂದೆಯೇ ಪೂಜ್ಯನು, ತಂದೆಯೇ ಪರದೇವತೆಯು. ಯಾವನು ತಂದೆಯ ವಾಕ್ಯವನ್ನು ಮೀರುತ್ತಾನೋ ಅವನು ರೌರವ ನರಕವನ್ನು ಹೊಂದುತ್ತಾನೆ. ಯಾವನು ತಂದೆಯ ವಾಕ್ಯವೇ ಪರಮಾತ್ಮನ ವಾಕ್ಯವೆಂದು ತಿಳಿದು ಆಚರಿಸುತ್ತಾನೋ ಅವನು ಇಹಪರಗಳಲ್ಲಿ ಪರಮಸುಖವನ್ನು ಹೊಂದುತ್ತಾನೆ. ಪಾಪಿಯೇ, ನೀನು ನನ್ನ ವಚನವನ್ನುಲಂಘನಮಾಡಿದರಿಂದ ನನ್ನ ಪುತ್ರನಲ್ಲ, ಶತ್ರುವು ಈಗಲೇ ನಿನ್ನನ್ನು ಯಮಪಟ್ಟಣಕ್ಕೆ ಕಳುಹುವನೆಂದು ಕೋಪದಿಂದ ಶಪಿಸಿದ ಕ್ಷಣವೇ, ಮೃತನಾಗಿ ಭೂಮಿಯಲ್ಲಿ ಬೀಳುವಂಥವನಾದನು. ವಸುವೆಂಬ ಹೆಸರಿನಿಂದ ಹುಟ್ಟಿದ ಅಗ್ನಿಯು ಮೃತನಾದ ಮೇಲೆ ವಿಶ್ವಾವಸುವೆಂಬ ಹೆಸರಿನಿಂದ ಜನಿಸಿದ ವಾಯುವನು ಕರದು ಮುನಿಯು ಇಂತೆಂದನು.

**ಜಮದಗ್ನಿ:**— ಎಲೇ ವಿಶ್ವಾವಸುವೇ, ನನ್ನ ವಾಕ್ಯದ ಪ್ರಕಾರ ಈ ದುಷ್ಟೆಯಾದ ರೇಣುಕೆಯನ್ನು ನಿಶಿತವಾದ ಖಡ್ಗದಿಂದ ನನ್ನೆದುರಿಗೆ ಛೇದಿಸು.

**ವಿಶ್ವಾವಸು:**— ಹೇ ಪಿತನೇ, ಸರ್ವಗುರುಗಳೊಳಗೆ ತಾಯಿಯು ಪರಮ ಗುರುವಾಗಿದ್ದಾಳೆ. ಆಕೆಯನ್ನು ಕೊಂದು ಪುತ್ರನು ಯಾವಗತಿಯನ್ನು ಹೊಂದುವನು ? ತಂದೆಗಿಂತಲೂ ತಾಯಿಯೇ ಪೂಜ್ಯಳೆಂದು ಹೇಳುತ್ತಾರೆ. ಕಾರಣ ತಾಯಿಯನ್ನು ಕೊಲ್ಲುವದು ನನ್ನಿಂದಾಗದು.

**ಜಮದಗ್ನಿ:**— ಎಲಾ ನೀಚಾ, ಧರ್ಮಾಧರ್ಮಗಳನೊಳಗುಟ್ಟು ಅರಿಯದೆ ನಿರರ್ಥಕ ಶ್ವಾನನಂತೆ ಬೊಗಳುವ ಪಿತೃನಿಂದಕನೇ, ನಿನ್ನ ಅಣ್ಣನ ಗತಿ ಯನ್ನು ಹೊಂದು ಎಂದು ಕ್ರೋಧದಿಂದ ಶಪಿಸಲು ತತ್‌ಕ್ಷಣವೇ ಭೂಮಿಗೆ ಬಿದ್ದು ಮೃತನಾದನು.

---

## ೨೩ನೇ ಅಧ್ಯಾಯ

**ಸ್ಕಂದ:**— ಋಷಿಗಳಿರಾ, ದೇವಶ್ರೇಷ್ಠರಾದ ಪುತ್ರರಿಬ್ಬರನ್ನು ಶಾಪಕೊಟ್ಟು ಕೊಂದು ಭೂಮಿಯಲ್ಲಿ ಕೆಡವಿ, ಜಮದಗ್ನಿಯು ಬ್ರಹತ್ಕಣ್ವನೆಂಬ ಹೆಸರಿ ನಿಂದ ಜನಿಸಿದ ಇಂದ್ರನನ್ನು ಕರೆದು, ಎಲೈ ಮಗನೇ, ನೀನು ಸತ್ಯಸಂಧನೂ ಧರ್ಮಜ್ಞನೂ ಗುರುಭಕ್ತನೂ ಇದ್ದೀ. ನಾನು ನಿನಗೆ ಗುರುವೂ ಪೂಜ್ಯನೂ ಮಾನ್ಯನೂ ತಂದೆಯೂ ಇದ್ದೇನೆ. ನನ್ನ ವಚನ ಪ್ರಕಾರ ಈ ದುಷ್ಟಳಾದ ವ್ಯಭಿಚಾರಿಣಿಯಾದ ರೇಣುಕೆಯನ್ನು ಖಡ್ಗದಿಂದ ಕಡಿದುಹಾಕಿಬಿಡು.

**ಬ್ರಹತ್ಕಣ್ವ:**— ಹೇ ತಂದೆಯೇ, ಈ ನನ್ನ ಸರ್ವೋತ್ತಮೆಯಾದ ಜನನಿಯನ್ನು ಮನಸ್ಸಿನಿಂದಾದರೂ ಸಹ ನಾನು ಕೊಲ್ಲಲಾರೆನು. ಯಾಕಂದರೆ ಈ ನನ್ನ ತಾಯಿಯ ಪದಕಮಲಗಳನ್ನು ಮುನಿಗಳು ನಿತ್ಯದಲ್ಲಿ ತಮ್ಮ ಹೃದಯದಲ್ಲಿ ಭಕ್ತಿಪೂರ್ವಕವಾಗಿ ಧ್ಯಾನಿಸುತ್ತಾರೆ. ಈಕೆಯು ಸರ್ವರಿಂದ ವಂದನೆ ಮಾಡಿಸಿಕೊಳ್ಳಲಿಕ್ಕೆ ಯೋಗ್ಯಳಿದ್ದಾಳೆ. ಈಕೆಯ ದರ್ಶನಮಾತ್ರದಿಂದಲೇ ಸರ್ವರೂ ಪಾಪದಿಂದ ಬಿಡುಗಡೆ ಹೊಂದುತ್ತಾರೆ. ಇಂಥ ಮಹಾಪತಿವ್ರತೆ ಯಾದ ಮತ್ತು ಪರಮಪೂಜ್ಯಳಾದ ಜನನಿಯನ್ನು ಖಡ್ಗದಿಂದ ವಧೆಮಾಡು ವದು ನನ್ನಿಂದ ಎಂದಿಗೂ ಆಗದು.

**ಸ್ಕಂದ:**— ಈ ಪ್ರಕಾರ ನುಡಿದ ಬ್ರಹತ್ಕಣ್ವನೆಂಬ ಮಗನ ಮಾತಿಗೆ ಜಮ-

ದಗ್ನಿಯು ಮತ್ತಷ್ಟು ಕೋಪಗೊಂಡು ಅವನನ್ನೂ ಶಾಪದಿಂದ ಧ್ವಂಸ ಮಾಡಿದನು. ಆ ಮೇಲೆ ಬೃಹದ್ಭಾನುವೆಂಬ ಸುತನನ್ನು ಕರೆದು ಹೀಗ ಹೇಳಿದನು.

**ಜಮದಗ್ನಿ**:—ಎಲೈ ಮಗನೇ, ನನ್ನಲ್ಲಿ ನಿನ್ನ ಭಕ್ತಿಯಿದ್ದರೆ ನನ್ನ ವಚನದಂತೆ ತೀಕ್ಷ್ಣವಾದ ಖಡ್ಗದಿಂದ ಈ ರೇಣುಕೆಯನ್ನು ಕಡಿದುಹಾಕು. ಯಾಕಂದರೆ ಈ ನೀಚಳು ಸ್ನಾನಮಾಡಲಿಕ್ಕೆ ಗಂಗೆಗೆ ಹೋದವಳು ಶೀಘ್ರವಾಗಿ ಹೊರಟು ಬಾರದೆ ಅಲ್ಲಿ ಜಲಕ್ರೀಡೆಗೆ ಬಂದೋರ್ವ ಗಂಧರ್ವನನ್ನು ನೋಡುತ್ತಾ ನಿಂತುಬಿಟ್ಟಳು. ಆದ್ದರಿಂದ ಇಂಥ ವ್ಯಭಿಚಾರಿಣಿಯ ಮುಖವನ್ನು ನಾನು ನೋಡಲಾರನು. ಶೀಘ್ರವಾಗಿ ಈಕೆಯನ್ನು ನಾಶಮಾಡು.

**ಬೃಹದ್ಭಾನು**:—ಎಲೈ ಜನಕನೇ, ಈ ನಿನ್ನ ಕಠೋರ ಪಾಪಕಾರಕ ವಚನವು ಯೋಗ್ಯವಾದುದಲ್ಲ. ನನ್ನ ತಾಯಿಯಾದ ರೇಣುಕಾದೇವಿಯು ಜಗನ್ಮಾತೆಯು. ಯಾವಾಕೆಯ ಪದಕಮಲಗಳಿಗೆ ದೇವತೆಗಳೆಲ್ಲರು ಭಕ್ತಿಯಿಂದ ವಂದಿಸುವರೋ, ಮತ್ತು ಯಾವಾಕೆಯ ಪುಣ್ಯಮೂರ್ತಿಯನ್ನು ಸಾಕ್ಷಾತ್ ಬ್ರಹ್ಮನು ಸಹ ನಿತ್ಯದಲ್ಲಿ ಭಕ್ತಿಯಿಂದ ಧ್ಯಾನಿಸುತ್ತಿರುವನೋ ಅಂಥ ಧರ್ಮಮೂರ್ತಿಯಾದ ಜನನಿಯನ್ನು ಸಂಹರಿಸುವದು ನನ್ನಿಂದ ಹೇಗೆ ಆಗುವದು? ಜಡಚೇತನಾತ್ಮಕವಾದ ಸರ್ವಜಗತ್ತು ಯಾವಾಕೆಯು ಈ ಕ್ಷಣಮಾತ್ರದಿಂದ ತೋರುವುದೋ ಮತ್ತು ಯಾವಾಕೆಯ ಸ್ವರೂಪವನ್ನು ಬ್ರಹ್ಮನಾದರೂ ಮನಸ್ಸಿನಿಂದ ಚಿಂತಿಸಿ ತಿಳಿಯಲಾರನೋ ಅಂಥ ಮಹಾಮಹಿಮಳನ್ನು ವಧಿಸಲಿಕ್ಕೆ ನನ್ನ ಕೈ ಹೇಗೆ ಏಳುವದು? ಮತ್ತು ಯಾವಾಕೆಯ ಅನ್ನೋದಕದಾನದಿಂದ ಅನೇಕ ಮಹರ್ಷಿಗಳೂ, ಅನ್ಯ ಪ್ರಾಣಿಗಳೂ ನಿತ್ಯ ಸಂತೃಪ್ತಿಯನ್ನು ಹೊಂದುವರೋ ಮತ್ತು ಯಾವಾಕೆಯು ಅಸ್ವೈತನಾದಿಗಳ ವಿದ್ಯಾರೂಪಗಳು ಕಲ್ಪವೃಕ್ಷದಂತೆ ಸರ್ವರಿಗೆ ಇಚ್ಛಿತ ಫಲವನ್ನು ಕೊಡುವವಳು ಇರುವಳೋ ಇಂಥ ತಾಯಿಯನ್ನು ಛೇದಿಸುವದು ನನ್ನಿಂದ ಹೇಗೆ ಆಗುವದು? ಹೇ ಪಿತನೇ, ನಾನು ನಿನ್ನ ವಚನದ ಪ್ರಕಾರ ದೇಹವನ್ನಾದರೂ ತ್ಯಾಗಮಾಡುವೆನು, ಅಗ್ನಿಯಲ್ಲಾದರೂ ಪ್ರವೇಶ ಮಾಡುವೆನು, ಜಲದಲ್ಲಿಯಾದರೂ ಮುಳುಗುವೆನು, ಘೋರ ವಿಷವನ್ನಾದರೂ ಕುಡಿಯುವೆನು, ಶಸ್ತ್ರದಿಂದ ಶರೀರವನ್ನು ಚೂರುಚೂರು ಮಾಡಿಸಿಕೊಳ್ಳುವೆನು ಪರಂತು, ನನ್ನ ತಾಯಿಯನ್ನು ಕೊಲ್ಲಲಾರೆನು.

# ೨೪ನೇ ಅಧ್ಯಾಯ

**ಸ್ಕಂದ:**—ಮುನಿಗಳೇ, ಆ ಬ್ರಹದ್ಭಾನುವಿನ ವಚನವನ್ನು ಕೇಳಿ ಜಮದಗ್ನಿ ಮುನ್ನಿನಂತೆ ಕ್ರೋಧದಿಂದ ಶಾಪಕೊಟ್ಟು ಅವನನ್ನೂ ಭೂಮಿಯಲ್ಲಿ ಒರಗಿಸಿದನು. ಈ ಪ್ರಕಾರ ದೇವಶ್ರೇಷ್ಠರಾದ ನಾಲ್ಕುಮಂದಿ ಮಕ್ಕಳು ಜಮದಗ್ನಿಯ ಶಾಪದಿಂದ ದಗ್ಧಮಾಡಲ್ಪಟ್ಟರು. ಆಗ ಆಶ್ರಮದಲ್ಲೆಲ್ಲ ಹಾಹಾಕಾರವೆದ್ದಿತು. ಸರ್ವಮುನಿಗಳೂ, ದೇವತೆಗಳೂ, ಚಾರಣರೂ ಜಮದಗ್ನಿಯ ಭೀಕರಕೃತ್ಯವನ್ನು ನೋಡಿ ಅತ್ಯಂತ ಚಿಂತೆಗೊಳಗಾದರು. ಜಮದಗ್ನಿಯು ಆ ಮೇಲೆ ಕೈಲಾಸದಲ್ಲಿ ಇದ್ದಂಥ ರಾಮನನ್ನು ಸ್ಮರಣ ಮಾಡಿ, ಹೇ ರಾಮನೇ, ರಾಮನೇ, ರಾಮನೇ, ಎಂದು ಮೂರು ಸಾರಿ ಉಚ್ಚಧ್ವನಿಯಿಂದ ಕೂಗಿ ಕರೆದನು. ಆ ಧ್ವನಿಯನ್ನು ಕೈಲಾಸದಲ್ಲಿದ್ದ ರಾಮನು ಕೇಳಿ ಪರಮಾತ್ಮನ ಅಪ್ಪಣೆಯನ್ನು ಪಡೆದು ತತ್‌ಕ್ಷಣವೇ ಬಿಲ್ಲುಬಾಣಗಳನ್ನು ತೆಗೆದುಕೊಂಡು ತಂದೆಯ ಆಶ್ರಮಕ್ಕೆ ತ್ವರಿತದಿಂದ ಬಂದು ನೋಡುವಷ್ಟರಲ್ಲಿ, ಋಷಿಗಳೆಲ್ಲರೂ ಭೀತಿಯಿಂದ ಅತ್ಯಂತ ದುಃಖಿತರಾಗಿದ್ದಾರೆ. ಜಮದಗ್ನಿಋಷಿಯು ಮಹಾಕೋಪ ವಿಶಿಷ್ಟನಾಗಿದ್ದಾನೆ. ರೇಣುಕಾದೇವಿಯು ವಿನಯದಿಂದ ಕೈಮುಗಿದುಕೊಂಡು ನಿಂತಿದ್ದಾಳೆ; ನಾಲ್ಕುಮಂದಿ ಅಣ್ಣಂದಿರು ಮೃತರಾಗಿ ಸುಟ್ಟಿನುಲಿಯಂತೆ ಭೂಮಿಯಲ್ಲಿ ಬಿದ್ದಿದ್ದಾರೆ. ಆದರೂ ಧೈರ್ಯಶಾಲಿಯೂ, ಪಿತೃಭಕ್ತಿಯುಳ್ಳವನೂ ಆದ ರಾಮನು ತಂದೆತಾಯಿಗಳಿಗೆ ಭಕ್ತಿಯಿಂದ ಸಾಷ್ಟಾಂಗನಮಸ್ಕಾರ ಮಾಡಿ ಆಲಂಗಿಸಿ ವಿನಯದಿಂದ ಕೈಗಳನ್ನು ಮುಗಿದುಕೊಂಡು ತಂದೆಯ ಮುಂದೆ ನಿಂತು ಇಂತೆಂದನು.

**ರಾಮ:**—ಹೇ ತಂದೆಯೇ, ನಿನ್ನ ಆಜ್ಞಾಪ್ರಕಾರವಾಗಿ ನಾನು ಕೈಲಾಸದಿಂದ ಬಂದಿದ್ದೇನೆ. ಶೀಘ್ರವಾಗಿ ನಾನು ಏನು ಮಾಡಬೇಕೆಂಬದನ್ನು ಅಪ್ಪಣೆ ಕೊಡಬೇಕು. ಸತ್ಪಿತನ ಆಜ್ಞೆಯನ್ನು ಪಾಲಿಸುವ ತನುಜರೇ, ಧರೆಯಲ್ಲಿ ಧನ್ಯರು. ನೀನು ನನಗೆ ಪಿನಾಕಧಾರಿಯಾದ ಪರಮಾತ್ಮನಂತೆ ಪೂಜ್ಯನು. ನಿನ್ನ ಸಮಾನ ಪೂಜ್ಯರು ಮೂರು ಲೋಕದಲ್ಲಿ ನನಗೆ ಯಾರೂ ಇಲ್ಲ. ನೀನೇ ನನಗೆ ಪರಬ್ರಹ್ಮಸ್ವರೂಪನು, ನೀನೇ ಓಂಕಾರಸ್ವರೂಪನು, ನೀನೇ ಅಗ್ನಿಸ್ವರೂಪನು, ನೀನೇ ಚಂದ್ರಸ್ವರೂಪನು. ನೀನೇ ಸರ್ವದೇವಸ್ವರೂ

ಪನು. ನಿನ್ನ ವ್ಯತಿರಿಕ್ತ ಅನ್ಯವೇನೂ ಇಲ್ಲ. ಕಾರಣ ಜನಕನೇ ಯಾತ ಕ್ಕೋಸ್ಕರ ನನ್ನನ್ನು ಕರೆದಿ, ಶೀಘ್ರವಾಗಿ ಹೇಳು. ನಿನ್ನ ಇಚ್ಛಿತವನ್ನು ಪ್ರಧಾನ ಮಾಡಲಿಕ್ಕೆ ಮೂರುಲೋಕವನ್ನು ಸಹ ತಲ್ಲಣಗೊಳಿಸುವೆನು.

---

## ೨೫ನೇ ಅಧ್ಯಾಯ

**ಸ್ಕಂದ:**—ಹೇ ಮುನಿಗಳೇ, ಈ ಪ್ರಕಾರ ರಾಮನ ಮಾತುಗಳನ್ನು ಕೇಳಿ ಜಮದಗ್ನಿಯು ಪರಮಶಾಂತನಾಗಿ, ಪ್ರಿಯಪುತ್ರನಾದ ರಾಮನನ್ನು ಕುರಿತು ಇಂತೆಂದನು.

**ಜಮದಗ್ನಿ:**—ಹೇ ಪುತ್ರನೇ, ನೀನು ನನಗೆ ಪೂರ್ವಸಖನು. ತ್ರಿಭುವನಪಾಲಕ ನಾದ ಹರಿಯು ಈಗ ಪುತ್ರನಾಗಿ ಲೋಕೋದ್ಧಾರಗೋಸುಗ ಹುಟ್ಟಿರುವಿ. ನಾನು ಶಂಭುತೇಜಸ್ಸ್ವರೂಪನೆಂದು, ತ್ರಿಕಾಲಜ್ಞರಾದ ಋಷಿಗಳು ಹೇಳು ತ್ತಾರೆ. ಈ ರೇಣುಕೆಯು ಗಂಗಾ ಮತ್ತು ಅದಿತಿಸ್ವರೂಪಳೆಂದು ಹೇಳು ತ್ತಾರೆ. ಆದರೆ ಈಗ ಸಂಭವಿಸಿದ್ದೇನಂದರೆ, ಮಗನೇ ನಿನ್ನ ತಾಯಿಯಾದ ರೇಣುಕೆಯು ಗಂಗಾಸ್ನಾನಕ್ಕೆ ಹೋಗಿ ಅಲ್ಲಿ ಒಬ್ಬ ಸ್ಮರರೂಪಧಾರಿಯಾದ ಗಂಧರ್ವನನ್ನು ನೋಡುತ್ತ ನಿಂತದ್ದರಿಂದ ದೇವತಾ ಅತಿಥಿಗಳ ಪೂಜೋ ಪಚಾರದ ಕಾಲವು ಮೀರಿ ಹೋಯಿತು. ಇದಕ್ಕಿಂತಲೂ ಪಾಪಕಾರಕ ವಾದದ್ದು ಯಾವದೂ ಇಲ್ಲ. ಆದ್ದರಿಂದ ಸುತನೇ ಈ ದುಶ್ಚಾರಿಣಿಯನ್ನು ಶೀಘ್ರವಾಗಿ ಕಡಿದುಹಾಕು, ಎಂದು ಜಮದಗ್ನಿಯು ನುಡಿದ ಕ್ಷಣವೇ ರಾಮನು ಹಿಂದು ಮುಂದೆ ನೋಡದೆ ತಂದೆಯ ವಾಕ್ಯವನ್ನು ವೇದವಾಕ್ಯ ವೆಂದು ತಿಳಿದು ಕೈಯೊಳಗಿನ ಕೊಡಲಿಯಿಂದ ತಾಯಿಯಾದ ರೇಣುಕಾ ದೇವಿಯ ಶಿರವನ್ನು ಕಡಿದುಬಿಟ್ಟನು. ಆಗ ಪಾಪನಾಶಕಳಾದ ದೇವಿಯು ಕಡಿದ ಬಾಳೆಯ ಮರದಂತೆ ಭೂಮಿಗೆ ಬಿದ್ದಳು. ಆಗ ಅಘಟಿತವಾದ ಕಾರ್ಯವನ್ನಾದರೂ ಮಾಡಿ, ಸತ್ಪಿತನಾಜ್ಞಾಪಾಲನಮಾಡಿದ ರಾಮನ ಸ್ತುತ್ಯಕಾರ್ಯಕ್ಕೆ ದೇವತೆಗಳು ಮೆಚ್ಚಿ ರಾಮನ ಮಸ್ತಕದ ಮೇಲೆ ಪುಷ್ಪ ವೃಷ್ಟಿಯನ್ನು ಮಾಡಿದರು. ದೇವದುಂದುಭಿಗಳು ಮೊಳಗಿದವು. ಜಮ ದಗ್ನಿಯು ಅತ್ಯಂತ ಹರುಷದಿಂದ ರಾಮನನ್ನು ಆಲಿಂಗಿಸಿ ಅವನ ಅತುಲ ಭಕ್ತಿಯನ್ನು ಹೊಗಳಿ ಇಂತೆಂದನು.



ಶ್ರೀ ಜಮದಗ್ನಿ ಮಹರ್ಷಿಯು ಭಾರ್ಗವರಾಮನಿಂದ ರೇಣುಕೆಯ ವಧ
ಮಾಡಿಸುವದು

**ಜಮದಗ್ನಿ:**—ಎಲೈ ರಾಮನೇ, ಭೃಗುವಂಶವಿವರ್ಧನನೇ, ನಿನ್ನ ಭಕ್ತಿಯಿಂದ ನಾನು ಪೂರ್ಣತುಷ್ಟನಾದೆನು. ನಿನ್ನ ವಾಂಛಿತಾರ್ಥವನ್ನು ಬೇಡಿಕೋ, ಕೊಡುವೆನು. ನೀನು ಪ್ರಾಕೃತ ಪುತ್ರನಲ್ಲಿ ಅಲೌಕಿಕನು. ಇಂಥ ಧರ್ಮಮೂರ್ತಿಯು ನನಗೆ ಸುತನಾದ್ದರಿಂದ ನಾನು ಧನ್ಯನು. ಕೃತಕೃತ್ಯನು. ಯಾವನು ನಿತ್ಯದಲ್ಲಿ ಭಕ್ತಿಪೂರ್ವಕವಾಗಿ ತಂದೆಯ ಆಜ್ಞೆಯನ್ನು ಪಾಲಿಸುತ್ತ ತಾಯಿಯ ಹಿತಜಾತಕನಾಗಿರುತ್ತಾನೋ, ಅವನು ದೇವತೆಗಳಿಂದಲೂ ಪೂಜಿಸಿಕೊಳ್ಳಲಿಕ್ಕೆ ಯೋಗ್ಯನಾಗುತ್ತಾನೆ. ಮಗನೇ, ನೀನು ಸತ್ಯವ್ರತನು. ಗುರುಭಕ್ತಿ ಪರಾಯಣನು, ಸರ್ವೋತ್ತಮನು. ನಿನ್ನ ವಾಂಛಿತವನ್ನು ಶೀಘ್ರವಾಗಿ ಬೇಡು, ಕೊಡುವೆನು.

**ರಾಮ:**—ಹೇ ಕೃಪಾನಿಧಿಯಾದ ಜನಕನೇ, ನನ್ನ ವಾಂಛಿತವನ್ನು ಕೊಡುವದು ನಿನ್ನ ಇಚ್ಛೆಯಿದ್ದರೆ, ಈ ಮೃತರಾದ ನನ್ನ ತಾಯಿಯೂ ಮತ್ತು ಬಂಧುಗಳೂ ಸಜೀವರಾಗುವಂತೆ ದಯಮಾಡಬೇಕು, ಎಂದು ರಾಮನು ನುಡಿಯಲು ತತ್‍ಕ್ಷಣವೇ ಜಮದಗ್ನಿ ಮುನಿಯು ಮಂತ್ರೋದಕವನ್ನು ಆ ಮೃತರಾದ ನಾಲ್ಕುಮಂದಿ ಮಕ್ಕಳಮೇಲೆ ಸಿಂಪಡಿಸಲು ಅವರು ಸಜೀವರಾಗಿ ಎದ್ದು ತಂದೆಗೆ ಹರುಷದಿಂದ ನಮಸ್ಕಾರ ಮಾಡಿದರು. ಆಗ ಜಮದಗ್ನಿಋಷಿಯು ಆನಂದದಿಂದ ಅವರನ್ನು ಆಲಿಂಗನಮಾಡಿಕೊಂಡು ರಾಮನನ್ನು ನೋಡಿ, ಎಲೈ ಮಗನೇ, ಮತ್ತೇನಾದರೂ ನಿನ್ನ ಇಚ್ಛೆಯಿದ್ದರೆ ಬೇಡು ಅದು ಅಸಾಧ್ಯವಿದ್ದರೂ ಕೊಡುತ್ತೇನೆ.

**ರಾಮ:**—ಎಲೈ ಧರ್ಮಮೂರ್ತಿಯಾದ ಜನಕನೇ, ಯಾವಾಕೆಯ ಪದ ಕಮಲಗಳನ್ನು ಮುನಿಗಳೂ, ಯೋಗಿಗಳೂ, ಸದಾ ಹೃದಯಕಮಲದಲ್ಲಿ ಧ್ಯಾನಿಸುವರೋ ಮತ್ತು ಯಾವಾಕೆಯು ಲೋಕಮಾತೆಯೂ ಮಹಾ ಪತಿವ್ರತಾಶಿರೋಮಣಿಯೂ ಆಗಿರುವಳೋ, ಅಂಥ ನನ್ನ ತಾಯಿಯನು ನಿನ್ನ ಭಕ್ತಿಗೋಸ್ಕರ ವಧೆ ಮಾಡಿದೆನು. ಕಾರಣ ಪುಣ್ಯಪುಂಜಳಾದ ನನ್ನ ಜನನಿಯನ್ನು ಬದುಕಿಸಿ, ರಾಮನು ಪರಹಿತಳಾವ ಮಾತೆಯನ್ನು ವಧಿಸಿದನೆಂಬ ಲೋಕಾಪವಾದವನ್ನು ದೂರಮಾಡಬೇಕು.

**ಜಮದಗ್ನಿ:**—ಹೆ ಪ್ರಿಯ ಪುತ್ರನೇ, ಧರ್ಮಜ್ಞನೇ, ನಿನ್ನ ಇಚ್ಛೆಯಂತೆಯೇ ಮಾಡುವೆನು. ಕ್ರೋಧದಿಂದ ಈ ಅಶುಭಕಾರ್ಯವು ನನ್ನಿಂದ ಘಟಿಸಿತು.

**ಸ್ಕಂದ:**—ಋಷಿಗಳಿರಾ, ಜಮದಗ್ನಿ ಮುನಿಯು ರಾಮನಿಗೆ ಹೀಗೆ ಹೇಳಿ ತತ್ಕ್ಷಣವೇ ರೇಣುಕಾದೇವಿಯ ಮೇಲೆ ಮಂತ್ರೋದಕವನ್ನು ಸಿಂಪಡಿಸಿದನು. ಆಗ ರೇಣುಕಾದೇವಿಯು ಮಲಗಿದವಳು ಏಳುವಂತೆ ಎದ್ದು, ಜಮದಗ್ನಿ ಋಷಿಗೆ ಹರುಷದಿಂದ ನಮಸ್ಕಾರ ಮಾಡಿ, ಐದು ಮಂದಿ ಮಕ್ಕಳನ್ನು ಆಲಿಂಗನಮಾಡಿದಳು. ಅವರಾದರೂ ಆನಂದದಿಂದ ತಾಯಿಯನ್ನು ಆಲಿಂಗಿಸಿ ಹೀಗೆ ಕೇಳಿದರು.

**ಪುತ್ರರು:**—ಎಲೈ ತಾಯಿಯೇ, ಏನು ಕಾರಣ ನೀನು ನಮ್ಮನ್ನು ಬಿಟ್ಟು ಇಷ್ಟು ಹೊತ್ತಿನವರೆಗೆ ಭೂಮಿಯಲ್ಲಿ ಮಲಗುವಂಥವಳಾಗಿದ್ದಿ? ಒಂದು ಘಳಿಗೆಯಾದರೂ ನಿನ್ನ ಬಿಟ್ಟು ಜೀವಿಸುವದು ನಮ್ಮಿಂದಾಗುವದಿಲ್ಲ. ನಿನ್ನ ಜೀವನದಿಂದಲೇ ಸಕಲ ಜೀವಗಳು ಜೀವಿಸುತ್ತವೆ. ನಿನ್ನಿಂದಲೇ ಈ ಜಗತ್ತು ಧರಿಸಲ್ಪಟ್ಟಿರುತ್ತದೆ. ಹೀಗೆ ಮಕ್ಕಳು ನುಡಿಯುವಷ್ಟರಲ್ಲಿ ರೇಣುಕಾದೇವಿಯ ಮಸ್ತಕದ ಮೇಲೆ ದೇವತೆಗಳು ಪುಷ್ಪವೃಷ್ಟಿಯನು ಸುರಿಸಿದರು. ದೇವದುಂದುಭಿಗಳು ಮೊಳಗಿದವು. ಸುರ, ಮುನಿ, ಕಿನ್ನರ, ಗಂಧರ್ವ ಮೊದಲಾದವರು ಪರಮಾನಂದದಿಂದ ಸ್ತುತಿಸಿದರು.

---

## ೨೬ನೇ ಅಧ್ಯಾಯ

**ಸ್ಕಂದ:**—ಎಲೈ ಮುನಿಗಳೇ, ರೇಣುಕಾದೇವಿಯು ಸಜೀವಳಾದ ಮೇಲೆ, ಜಮದಗ್ನಿಯು ಅವಳನ್ನು ವಸ್ತ್ರಾಭರಣಗಳಿಂದ ಸತ್ಕರಿಸಿ, ಪ್ರಿಯಳೇ ಮನಸ್ಸಿನ ದುಃಖವನ್ನು ಬಿಡು. ಭದ್ರೇ, ಕ್ರೋಧವಶದಿಂದ ನಾನು ನಿನಗೆ ತಾಪ ಕೊಟ್ಟೆನು. ನೀನು ನಿಶ್ಚಯವಾಗಿ ಮಹಾಪತಿವ್ರತೆ ಇರುತ್ತಿ. ನೀನೇ ನನಗೆ ಪರಮಪ್ರಿಯಳು. ನೀನೇ ಲೋಕೇಶ್ವರಿಯೂ, ಸರ್ವ ದೇವತೆಗಳ ಜನನಿಯೂ, ಅತ್ಯಂತ ಶುದ್ಧಳೂ ಎಂಬದನ್ನು ನಾನು ಜ್ಞಾನ ದೃಷ್ಟಿಯಿಂದ ತಿಳಿದೆನು ಎಂದು ಜಮದಗ್ನಿ ಋಷಿಯು ಆ ರೇಣುಕಾದೇವಿಯನ್ನು ಆಲಿಂಗಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಆಗ ದೇವತೆಗಳೂ, ಗಂಧರ್ವರರೂ, ಸಿದ್ಧರೂ, ಸಾಧ್ಯರೂ, ಋಷಿಗಳೂ ವಸ್ತ್ರಾಭರಣಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಏಕವೀರಾದೇವಿಯನ್ನು ಭಕ್ತಿ

ಪೂರ್ವಕ ಪೂಜೆಮಾಡಿದರು. ಆ ಮೇಲೆ ಜಮದಗ್ನಿ ಋಷಿಯು ತನ್ನೊಳ ಗಿದ್ದ ಕ್ರೋಧಕ್ಕೆ ಇಂತೆಂದನು.

**ಜಮದಗ್ನಿ**:—ಎಲೇ ದುರಾಚಾರ, ಕ್ರೂರ, ಚಾಂಡಾಲ, ನಿರ್ದಯಕ್ರೋಧನೇ ಶೀಘ್ರವಾಗಿ ನನ್ನ ಶರೀರವನ್ನು ಬಿಟ್ಟು ಹೊರಟುಹೋಗು. ನಿನ್ನಿಂದ ಪಿತೃಮಾತೃವಧೆಯೂ, ಬಾಲಬ್ರಹ್ಮವಧೆಯೂ ಮೊದಲಾದ ಘೋರ ಪಾಪಕೃತ್ಯಗಳು ಸಂಭವಿಸುತ್ತವೆ. ಆದ್ದರಿಂದ ನೀನು ಮಾತಾಡಿಸಲಿಕ್ಕೂ, ಸ್ಪರ್ಶಮಾಡಲಿಕ್ಕೂ ಸಹ ಅಯೋಗ್ಯನಿರುತ್ತಿ. ನೀನು ಯಾವಾಗಲೂ ಪ್ರಾಣಿಹಿಂಸೆಯಲ್ಲಿ ಪ್ರವರ್ತನಾಗಿರುವದರಿಂದ ನನ್ನಲ್ಲಿ ಇರಲಿಕ್ಕೆ ತಕ್ಕವನಲ್ಲ.

**ಸ್ಕಂದ**:—ಮುನಿಗಳೇ, ಜಮದಗ್ನಿಯು ಹೀಗೆ ಕ್ರೋಧವನ್ನು ನಿಂದಿಸಿ ನುಡಿ ಯಲು ಕ್ರೋಧವು ನಕ್ಕು ಶರೀರದೊಳಗಿಂದಲೇ ಹೀಗೆ ಅಂದಿತು.

**ಕ್ರೋಧ**:—ಹೇ ಋಷಿಯೇ, ಮೂರು ಲೋಕವೆಲ್ಲವು ನನ್ನಿಂದ ವ್ಯಾಪಿ ಸಲ್ಪಟ್ಟಿರುತ್ತದೆ. ಯಜ್ಞ, ದಾನ, ತಪ ಮೊದಲಾದ ಕರ್ಮಗಳು ನಾನಿಲ್ಲದೆ ನಡೆಯಲಾರವು. ಯಾಕಂದರೆ, ದುಷ್ಟನಿಗ್ರಹ, ಶಿಷ್ಟಪ್ರತಿಪಾಲನ ಮಾಡುವದು ಮಹಾತ್ಮರ ಕಾರ್ಯವು. ದುಷ್ಟರ ನಿಗ್ರಹವಿಲ್ಲದೆ ಇಷ್ಟರ ಪಾಲನವಾಗಲಾರದು. ದುಷ್ಟರ ನಿಗ್ರಹವು ನನ್ನಿಂದಲೇ ಆಗುವದು. ನನ್ನಿಂದಲೇ ಸಕಲ ಪೃಥ್ವಿಯು ಧರಿಸಲ್ಪಡುತ್ತದೆ. ನನ್ನಿಂದಲೇ ನಾಶ ಮಾಡಲ್ಪಡುತ್ತದೆ. ನನ್ನ ಹೊರತು ಯಾವ ದೇವತೆಗಳ ಕಾರ್ಯವು ಸಾಗದು.

**ಜಮದಗ್ನಿ**:—ಎಲೈ ದುಷ್ಟನೇ, ಪ್ರಾಣಹಿಂಸಕನೇ, ನನ್ನ ಶರೀರದಿಂದ ಶೀಘ್ರ ವಾಗಿ ಪೊರಮಡು. ಚಾಂಡಾಲನೇ, ನಿನ್ನಿಂದ ನನಗೆ ಪ್ರಯೋಜನವಿಲ್ಲ.

**ಕ್ರೋಧ**:—ಹೇ ಮುನಿಯೇ, ನಾನು ನಿನ್ನ ಶರೀರದಿಂದ ಹೊರಗೆ ಹೋಗುವ ದಿಲ್ಲ. ಯಾಕಂದರೆ ನಿನಗೆ ಮುಂದೆ ನನ್ನಿಂದ ಪ್ರಯೋಜನ ಇದೆ. ಹೇ ವಿಪ್ರನೇ, ನನ್ನನ್ನು ಬಿಡುವದು ನಿನಗೆ ಯೋಗ್ಯವಲ್ಲ. ನಾನಿಲ್ಲದೆ ಯಾವ ಸಿದ್ಧಿಯೂ ನಿನಗೆ ಆಗದು.

**ಜಮದಗಿ**:—ಎಲೇ ಕ್ರೂರನೇ, ನಿನ್ನಿಂದ ನನಗೆ ಏನೂ ಪ್ರಯೋಜನವಿಲ್ಲ. ಕಾರಣ ತೀವ್ರವೇ ನನ್ನ ಶರೀರದಿಂದ ಹೊರಟುಹೋಗು.

**ಸ್ಕಂದ**:—ತಪಸ್ವಿಗಳೇ, ಜಮದಗ್ನಿಯು ಏನು ಹೇಳಿದರೂ ಕೇಳದ್ದರಿಂದ ಕ್ರೋಧವು ಕಾಗೆ ಕೋಗಿಲಗಳ ಹಾಗೆ ಕಪ್ಪು ಬಣ್ಣವುಳ್ಳದ್ದಾಗಿಯೂ, ಪ್ರಳ

ಯಾಗ್ನಿಯಂತೆ ಕೆಂಪುಬಣ್ಣದ ಕಣ್ಣುಳ್ಳವನಾಗಿಯೂ, ನೀಲಬಣ್ಣದ ಕೌಪೀನ ಧಾರಿಯಾಗಿಯೂ, ಭಯಂಕರ ಕ್ರೂರದೃಷ್ಟಿಯುಳ್ಳವನಾಗಿಯೂ, ಮಹತ್ತರ ವಿಕರಾಳದೇಹವುಳ್ಳವನಾಗಿಯೂ, ಉದ್ದವಾದ ಭೀಕರ ತುಟಿಗಳುಳ್ಳವನಾಗಿಯೂ, ಭೀಕರವಾದ ನಾಲಗೆಯನ್ನು ಚುಮಿಕಿಸುತ್ತಾ ಮುನಿಯ ಮುಂಭಾಗದಲ್ಲಿ ನಿಂತು, ಕೈಗಳಂ ಮುಗಿದು, ಕ್ರೋಧವು ಇಂತೆಂದನು.

**ಕ್ರೋಧ**:—ಹೇ ಮುನಿಯೇ, ಅವಶ್ಯವಾಗಿ ಹೊರಟುಹೋಗೆಂದು ನೀನು ಅನ್ನುವಂತೆ ನಾನು ಹೊರಟುಹೋಗುತ್ತೇನೆ. ಆದರೆ ನನ್ನ ಹೊರತು ನಿನ್ನ ಕಾರ್ಯವು ಕಿಂಚಿತ್ತಾದರೂ ಸಾಗದು. ಇದು ಸತ್ಯವೆಂಬು ತಿಳಿ. ನಾನು ಸರ್ವರೊಳಗೆ ಇರುವವನು. ದೇವತೆಗಳಿಗೆ ನಾನೇ ಈಶ್ವರನು.

---

## ೨೭ನೇ ಅಧ್ಯಾಯ

**ಸ್ಕಂದ**:—ಹೇ ಮುನಿಗಳೇ, ಈ ಪ್ರಕಾರ ಕ್ರೋಧದ ವಚನವನ್ನು ಕೇಳಿ ಜಮದಗ್ನಿಯು ಆ ಕ್ರೋಧಕ್ಕೆ ಇಂತೆಂದನು.

**ಜಮದಗ್ನಿ**:—ಎಲೈ ಕ್ರೂರ ಪಾಪಿಷ್ಟ ಕ್ರೋಧನೇ, ಶೀಘ್ರವಾಗಿ ನನ್ನ ಆಶ್ರಮ ಬಿಟ್ಟು ಹೊರಟುಹೋಗು. ನಿನ್ನ ದಾರಿಗೆ ನೀರು ಹಾಕುತ್ತೇನೆ.

**ಕ್ರೋಧ**:—ಹೇ ಪ್ರಭೋ, ವಿಚಾರಿಸಿ ನೋಡು. ನನ್ನನ್ನು ಬಿಟ್ಟರೆ ನಿನಗೆ ಮಹಾ ಹಾನಿಯಾಗುವದು. ಮುನಿಯೇ, ಸರ್ವಕಾರ್ಯಗಳು ಕ್ರೋಧದಿಂದಲೇ ಸಿದ್ಧವಾಗುತ್ತವೆ. ರಣದಲ್ಲಿ ಸಕಲ ವೈರಿಗಳನ್ನು ನಾಶಮಾಡುವದು ಕ್ರೋಧವೇ. ತನ್ನ ಅನಿಷ್ಟವನ್ನು ಪರಿಹಾರಮಾಡಿಕೊಳ್ಳಬೇಕಾದರೆ ಕ್ರೋಧವಿಲ್ಲದಾಗದು.

**ಜಮದಗ್ನಿ**:—ನಿನ್ನಿಂದ ನನಗೆ ಯಾವ ಕಾಲದಲ್ಲಿಯೂ ಏನೂ ಪ್ರಯೋಜನ ಇಲ್ಲ. ಚಾಂಡಾಲನೇ ತೀವ್ರ ಪೊರಮಡು. ಇಲ್ಲದಿದ್ದರೆ ನಿನಗೆ ಶಾಪ ಕೊಡುವೆನು.

**ಕ್ರೋಧ**:—ಹೇ ಮುನಿಶ್ರೇಷ್ಠನೇ, ನಾನು ಮಹೇಶ್ವರನಿಂದ ಜನಿಸಿದ್ದೇನೆ. ಯೋಗಿಗಳ ಮತ್ತು ದೇವತೆಗಳೆಲ್ಲರ ಹೃದಯದೊಳಗೆ ನಾನು ವಾಸಿಸು



ಶ್ರೀ ದತ್ತಾತ್ರೇಯನು ಕಾರ್ತವೀರನ ತಪಸ್ಸಿಗೆ ಮೆಚ್ಚಿ ವರದಾನ ಮಾಡುವದು



ರಾವಣನು ನರ್ಮದಾತೀರದಲ್ಲಿ ಶಿವಪೂಜೆ ಮಾಡುತ್ತಿರಲು
ಕಾರ್ತವೀರಾರ್ಜುನನು ನದಿಯ ಪ್ರವಾಹವನ್ನು ತಡೆದು-ಶಿವಪೂಜೆಗೆ
ವಿಘ್ನ ಮಾಡುವದು

ತ್ತೇನೆ. ಕಾರಣ ನನ್ನನ್ನು ಬಿಡುವದು ಅತ್ಯಂತ ಅನುಚಿತವು. ಇದರ ಮೇಲೆ ನಿನ್ನ ಇಚ್ಛೆಯು.

**ಜಮದಗ್ನಿ**: – ಕ್ರೂರನಾದ ನಿನ್ನಿಂದ ಮೂರು ಲೋಕವು ಮೋಹಿಸಲ್ಪಟ್ಟಿರು ತ್ತದೆ. ಚಾಂಡಾಲನೇ, ಶೀಘ್ರವೇ ಹೊರಟುಹೋಗು.

**ಸ್ಕಂದ**:—ಋಷಿಗಳೇ ಜಮದಗ್ನಿಯು ಹೀಗೆ ನಿಂದಿಸಲಾಗಿ ಕ್ರೋಧವು ಅಲ್ಲಿಯೇ ಅಂತರ್ಧಾನವಾಯಿತು. ಆ ಮೇಲೆ ಜಮದಗ್ನಿಯು ರೇಣುಕಾ ದೇವಿಯನ್ನೂ, ಮುನಿಗಳನ್ನೂ, ಪುತ್ರರನ್ನೂ ಕೂಡಿಕೊಂಡು ಆಶ್ರಮ ದಲ್ಲಿ ಸುಖದಿಂದ ಇದ್ದನು. ರಾಮನು ಕೈಲಾಸಕ್ಕೆ ಹೋದನು. ಜಮ ದಗ್ನಿಯು ಕಾಮಧೇನು, ಕಲ್ಪವೃಕ್ಷ, ರೇಣುಕಾದೇವಿಯ ಸಹಾಯ ದಿಂದ ಸತ್ಕರ್ಮವನ್ನಾಚರಿಸಿ, ಸರ್ವರನ್ನು ತೃಪ್ತಿಪಡಿಸುತ್ತಿರಲಾಗಿ ಮೂರು ಲೋಕದಲ್ಲಿ ಇವನ ಕೀರ್ತಿಯು ಹಬ್ಬಿತು. ಆ ಕಾಲದಲ್ಲಿ ಬ್ರಹ್ಮಪುತ್ರ ನಾದ ನಾರದಮುನಿಯು ವೀಣೆಯನ್ನು ಬಾರಿಸುತ್ತ ನರ್ಮದೆಯ ತೀರ ದಲ್ಲಿದ್ದ ಮಾಹಿಷ್ಮತಿ ನಗರವನ್ನು ಪ್ರವೇಶಮಾಡಿದನು. ಆ ಮಾಹಿಷ್ಮತಿ ನಗರವು ನಾನಾ ಪ್ರಕಾರದ ರತ್ನಗಳಿಂದ ಶೋಭಿತವಾದ ಮನೆಗಳಿಂದಲೂ, ಭವ್ಯವಾದ ದೇವಾಲಯಗಳಿಂದಲೂ, ಆನೆ ಕುದುರೆಗಳ ತಂಡಗಳಿಂದಲೂ, ಫಲಪುಷ್ಪಗಳಿಂದ ಶೋಭಿತವಾದ ಹಿತ್ತಲತೋಟಗಳಿಂದಲೂ, ದೇವತೆ ಗಳಂತೆ ಸದ್ಗುಣಿಗಳಾದ ಜನಸಮೂಹದಿಂದಲೂ, ಸ್ವರ್ಗದಂತೆ ಶೋಭಾ ಯಮಾನವಾಗಿ ಮೆರೆಯುತಿತ್ತು. ಆ ಪಟ್ಟಣದಲ್ಲಿ ಹೈಹಯನೆಂಬ ಹೆಸರಿನ ಪ್ರಖ್ಯಾತ ಅರಸನಿದ್ದನು. ಅವನಿಗೆ ಕೃತವೀರ್ಯನೆಂಬ ಹೆಸರಿನ ಸುಪುತ್ರನು ಇದ್ದನು. ಅವನಿಗೆ ರಾಕಾವತಿಯೆಂಬ ಅತಿ ಸುಂದರಿಯಾದ ಸತಿ ಇದ್ದಳು. ಅವಳು ಒಂದು ದಿವಸ ಸೂರ್ಯಾಸ್ತ ಸಮಯದಲ್ಲಿ ಪತಿಗೆ ಇಂತೆಂದಳು.

**ರಾಕಾವತಿ**:—ಹೇ ಪ್ರಾಣನಾಥನೇ, ಈಗ ನನಗೆ ಕಾಮಬಾಧೆಯಾಗಿದೆ. ಶೀಘ್ರವಾಗಿ ಭೋಗವನ್ನು ಕೊಡು. ತಡವಾದರೆ ನನ್ನ ಪ್ರಾಣವು ತ್ಯಾಗ ವಾಗುವದು.

**ಕೃತವೀರ್ಯ**:—ಹೇ ಪ್ರೀಯಳೇ, ಸ್ವಲ್ಪ ತಡೆಯುವಂಥವಳಾಗು. ಇದು ರಾಕ್ಷಸರ ಸಂಚಾರಕಾಲವು. ಇನ್ನು ಸ್ವಲ್ಪ ಹೊತ್ತಿನಲ್ಲಿ ಪ್ರದೋಷಕಾಲ ಪೋಗುವದು. ಎಂದು ಕೃತವೀರ್ಯನು ಹೇಳಿದರೂ, ಕಾಮಪೀಡಿತಳಾದ

ರಾಕಾವತಿಯು ಕೇಳಿದ್ದರಿಂದ ಕೃತವೀರ್ಯನು ರಾಕಾವತಿಗೆ ಭೋಗ ಕೊಟ್ಟನು. ಆ ವೀರ್ಯದೊಡನೆ ಮಧುವೆಂಬ ಹೆಸರಿನ ದೈತ್ಯನು ರಾಕಾವತಿಯ ಗರ್ಭವನ್ನು ಪ್ರವೇಶಮಾಡಿ ಕಾರ್ತವೀರ್ಯನೆಂಬ ಹೆಸರಿನಿಂದ ಕರಹೀನನಾಗಿ ಉದಿಸಿದನು. ಮುಂದೆ ಅವನು ದತ್ತಾತ್ರೇಯಾಶ್ರಮಕ್ಕೆ ಹೋಗಿ ದತ್ತಾತ್ರೇಯನನ್ನೂ, ಹರನನ್ನೂ ಘೋರ ತಪಸ್ಸಿನಿಂದ ಮೆಚ್ಚಿಸಿ, ಅವರಿಂದ ವರವನ್ನು ಪಡೆದನು. ಮಹೇಶ್ವರನಿಂದ ಸಾವಿರ ಭುಜಗಳನ್ನು ಪಡೆದನು. ಮತ್ತು ದತ್ತಾತ್ರೇಯನಿಂದ ಬ್ರಾಹ್ಮಣರ ಹೊರತು ಅನ್ಯರಿಂದ ಅಪಜಯ ಹೊಂದದ ಪರಾಕ್ರಮವನ್ನು ಪಡೆದನು.

**ಋಷಿಗಳು**:—ಹೇ ಸ್ವಾಮಿಯೇ, ಮಧುದೈತ್ಯನು ಕಾರ್ತವೀರ್ಯನೆಂಬ ಹೆಸರಿನಿಂದ ಕ್ಷತ್ರಿಯನಾಗಿ ಜನಿಸಿದ ಕಾರಣವು ಗೊತ್ತಾಯಿತು. ಆದರೆ ಕರಹೀನನಾಗಿ ಏಕೆ ಜನಿಸಿದನು.

**ಸ್ಕಂದ**:—ಮುನಿಗಳೇ, ಪೂರ್ವಜನ್ಮದಲ್ಲಿ ಮಧುದೈತ್ಯನು ಶಿಖಿಯೆಂಬ ದೈತ್ಯನಿಂದ ಬೃಹಸ್ಪತಿಯೆಂಬ ಅವನ ಸತಿಯಲ್ಲಿ ಜನಿಸಿದ್ದನು. ಆಗ ಅವನು ಈಶ್ವರನ ಸಾವಿರ ಪೂಜೆಗಳನ್ನು ನಾಶಮಾಡಿದ್ದರಿಂದ, ನೀನು ಕರಹೀನನಾಗಿ ಮುಂದಿನ ಜನ್ಮದಲ್ಲಿ ಜನಿಸು ಎಂದು ಶಪಿಸಲ್ಪಟ್ಟಿದ್ದರಿಂದ ಈ ರಾಕಾವತಿಯ ಗರ್ಭದಿಂದ ಕರಹೀನನಾಗಿ ಜನಿಸಿದನು. ಹೀಗೆ ಕಾರ್ತವೀರ್ಯನು ಪರಮಾತ್ಮನ ಮತ್ತು ದತ್ತಾತ್ರೇಯನ ವರದಿಂದ ಮೂರು ಲೋಕವನ್ನು ಗೆದ್ದು, ನಿಷ್ಕಂಟಕವಾಗಿ ಸುಖದಿಂದ ಮಾಹಿಷ್ಮತಿ ನಗರದಲ್ಲಿ ವಾಸಮಾಡುತ್ತಿದ್ದನು. ಇವನು ಸ್ವರ್ಗದಲ್ಲಿ ದೇವತೆಗಳನ್ನೂ, ಪಾತಾಳದಲ್ಲಿ ದೈತ್ಯ ಪನ್ನಗರನ್ನೂ, ಮೃತ್ಯುಲೋಕದಲ್ಲಿ ಸರ್ವರಾಜರನ್ನೂ ಜಯಿಸಿದ್ದನು. ಹೇ ದ್ವಿಜರೇ, ಹೀಗಿರುತ್ತಿರುವಲ್ಲಿ ಕಾಲಾಂತರದಿಂದ ದಿಗ್ವಿಜಯ ಕ್ಕೋಸ್ಕರವಾಗಿ, ಮಹಾಬಲಶಾಲಿಯಾದ ರಾವಣನು ಲಂಕಾಪಟ್ಟಣದಿಂದ ತನ್ನ ಸೇನಾಸಮೇತನಾಗಿ ಸಂಚರಿಸುತ್ತ ಸಹಸ್ರಾರ್ಜುನನ ಮಾಹಿಷ್ಮತಿ ನಗರಕ್ಕೆ ಬಂದನು. ದಾರಿಯಲ್ಲಿ ನರ್ಮದಾ ನದಿಯಿರಲು ಅಲ್ಲಿ ರಾವಣನು ಇಳಿದುಕೊಂಡು ನದಿಯಲ್ಲಿ ಸೇನಾಸಹಿತ ಸ್ನಾನಮಾಡಿ, ತೀರದಲ್ಲಿ ಲಿಂಗ ಸ್ಥಾಪನೆಮಾಡಿ ಪೂಜಿಸುತ್ತಿರುವಷ್ಟರಲ್ಲಿ ನರ್ಮದಾನದಿಯ ಜಲವು ಏರಿ ಬಂದು ಪೂಜಾಸಾಮಗ್ರಿಗಳನ್ನೆಲ್ಲ ಮುಳುಗಿಸಿಬಿಟ್ಟಿತು. ಆಗ ರಾವಣನು ಹೀಗಾಗಲಿಕ್ಕೆ ಕಾರಣವೇನೆಂದು ಶೋಧಿಸಲಿಕ್ಕೆ ಚಾರರನ್ನು ಕಳುಹಿದನು.



ಕಾರ್ತವೀರಾರ್ಜುನನು ಶ್ರೀ ಬ್ರಹ್ಮದೇವರ ಸಾಕ್ಷಾತ್ಕಾರ ಮಾಡಿಕೊಂಡದು

ಆಗ ರಾಕ್ಷಸ ಮುಖರು ನರ್ಮದಾ ತೀರದೊಡನೆ ಶೋಧಿಸುತ್ತಾ ಬರಲು, ನರ್ಮದೆಯ ಜಲದಲ್ಲಿ ಹೈಹಾಧಿಪನು ಹಸ್ತಪಾದಗಳನ್ನು ಪಸರಿಸಿ ಜಲ ಕ್ರೀಡೆಯನ್ನಾಡುತ್ತಿದ್ದನು. ಆತನ ಮಹತ್ತರವಾದ ದೇಹದಿಂದ ಆ ಪುಣ್ಯ ನದಿಯ ಪ್ರವಾಹಕ್ಕೆ ಒಡ್ಡು ಹಾಕಿದಂತಾಗಿ ಪ್ರವಾಹವು ಹಿಂದಕ್ಕೆ ತಡೆದು ನಿಲ್ಲುವಂತಾದಾಗಿತ್ತು. ಆಗ ಆ ರಾಕ್ಷಸಶ್ರೇಷ್ಠರು ಈ ಅದ್ಭುತಮೂರ್ತಿ ಯನ್ನು ನೋಡಿ ನೀನಾರೆಂದು ಕೇಳಿದರು.

**ಸಹಸ್ರಾರ್ಜುನ:**—ನಾನು ಮಾಹಿಷ್ಮತಿ ನಗರದ ಅಧಿಪತಿಯಾದ ಕಾರ್ತ ವೀರ್ಯಾರ್ಜುನನು. ಈ ಪುಣ್ಯಕರವಾದ ನರ್ಮದೆಯ ಜಲದಲ್ಲಿ ಸ್ತ್ರೀಯರನ್ನು ಕೂಡಿಕೊಂಡು ಜಲಕ್ರೀಡೆಯನ್ನು ಆಡಲಿಕ್ಕೆ ಬಂದಿದ್ದೇನೆ. ನೀವು ಯಾರು ? ಏನುಕಾರಣ ಇಲ್ಲಿ ಬಂದಿರುವಿರಿ ? ನಿಮ್ಮನ್ನು ಯಾರು ಕಳುಹಿಸಿದರು ?

**ಭಟರು:**—ಹೇ ನೃಪನೇ, ಮಹಾಬಲಶಾಲಿಯಾದ ಲಂಕಾಧಿಪತಿ ರಾವಣನು ನಿನ್ನನ್ನು ಜಯಿಸುವುದಕ್ಕೆ ಇಲ್ಲಿಗೆ ಬಂದಿದ್ದಾನೆ ಎಂದು ಹೇಳಲು, ಕಾರ್ತ ವೀರ್ಯನು ಅತ್ಯಂತ ಕ್ರೋಧದಿಂದ ರಾವಣನ ಕಡೆಗೆ ಬಂದು ಇಂತೆಂದನು.

**ಕಾರ್ತವೀರ್ಯಾರ್ಜುನ:**—ಎಲೈ ರಾವಣನೇ, ಶೀಘ್ರವಾಗಿ ಯುದ್ಧಕ್ಕೆ ಸನ್ನದ್ಧನಾಗು. ಯುದ್ಧದಲ್ಲಿ ನಿನ್ನ ಮಹಾಪರಾಕ್ರಮವನ್ನು ನನ್ನೆದುರಿಗೆ ತೋರಿಸು. ಎಂದು ಸಹಸ್ರಾರ್ಜುನನು ಅಂದಕೂಡಲೇ ರಾವಣನು ಕೋಪದಿಂದ ಆಕಾಶಕ್ಕೆ ಹಾರಿ, ಸಹಸ್ರಾರ್ಜುನನ ಮೇಲೆ ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸಿದರು. ಆಗ ಕಾರ್ತವೀರ್ಯನು ಅತ್ಯಂತ ಕೋಪ ದಿಂದ ರಾವಣನ ಬಾಣಗಳನ್ನು ಮಧ್ಯದಲ್ಲಿಯೇ ಖಂಡಿಸಿ, ರಾವಣನ ಮೇಲೆ ಶಸ್ತ್ರಾಸ್ತ್ರಗಳ ಮಳೆಗರಿಸಿದನು. ಹೀಗೆ ರಾವಣನಿಗೂ, ಸಹ ಸ್ರಾರ್ಜುನನಿಗೂ ಘೋರಯುದ್ಧವಾಗಿ, ಸ್ವಲ್ಪಕಾಲದಲ್ಲಿಯೇ ಮಹಾ ಪರಾಕ್ರಮಶಾಲಿಯಾದ ಕಾರ್ತವೀರ್ಯನು ರಾವಣನ ಬಲವನ್ನೆಲ್ಲ ನಾಶ ಮಾಡಿ ರಾವಣನ ಮೇಲೆ ಶಂಭುಶಕ್ತ್ಯಾಸ್ತ್ರವನ್ನು ಪ್ರಯೋಗಿಸಿದನು. ಆ ಶಕ್ತಿಯು ಭಯಂಕರ ಶಬ್ದದಿಂದ ಹೋಗಿ ರಾವಣನ ಎದೆಯನ್ನು ಸೀಳಿ ಪಾತಾಳಕ್ಕೆ ಇಳಿದುಬಿಟ್ಟಿತು. ಆಗ ರಾವಣನು ವಜ್ರಹತಿಯಿಂದ ಪರ್ವತವು ಉರುಳುವಂತೆ ಶಕ್ತಿಯ ಹೊಡೆತದಿಂದ ದೇಹವು ಭೇದಿಸಿ ರಕ್ತಪ್ರವಾಹವು ಮೇರೆದಪ್ಪಿ ಹರಿದು ಭೂಮಿಗೆ ಬಿದ್ದನು. ರಾವಣನು

ಭೂಮಿಗೆ ಬಿದ್ದದ್ದನ್ನು ಕಂಡು ಉಳಿದ ರಾಕ್ಷಸರೆಲ್ಲರೂ ದಿಕ್ಕುದಿಕ್ಕಿಗೆ ಓಡಿಹೋದರು. ಕಾರ್ತವೀರ್ಯನು ರಾವಣನು ಬಿದ್ದದ್ದನ್ನು ನೋಡಿ ಶೀಘ್ರವಾಗಿ ಹೋಗಿ ಅವನನ್ನು ಹಿಡಿದೆಬ್ಬಿಸಿ ಶೈತ್ಯೋಪಚಾರಗಳಿಂದ ಉಪಚರಿಸಿ ಎಬ್ಬಿಸಿದನು. ಅವನನ್ನು ಬತ್ತಲೆಯಾಗಿ ರಥದ ಕಂಬಕ್ಕೆ ಕಟ್ಟಿಕೊಂಡು, ಮಾಹಿಷ್ಮತಿನಗರಕ್ಕೆ ವೈದು ಒಂದು ಮನೆಯಲ್ಲಿ ಕಂಬಕ್ಕೆ ಕಟ್ಟಿಸಿ, ಎಲೈ ರಾವಣನೇ, ನಾನು ಶೂರನು, ನಾನು ದೇವತೆಗಳನ್ನೆಲ್ಲ ಗೆದ್ದ ತ್ರೈಲೋಕಾಧಿಪತಿಯು ಮೊದಲಾದ ನಿನ್ನ ಆಡಂಬರದ ನುಡಿಯು ಮೂಢನೇ, ಎಲ್ಲಿ ಹೋಯಿತು. ಇನ್ನು ನೀನು "ನಾನು ಬ್ರಾಹ್ಮಣನು ನಿನ್ನ ದಾಸನು, ನಿನ್ನ ಶಿಶುವಿದ್ದೇನೆಂದು" ನನಗೆ ಶರಣುಹೊಕ್ಕು ಬೇಡಿ ಕೊಂಡರೆ ನಿನಗೆ ಜೀವದಾನವನ್ನು ಕೊಡುವೆನು ಎಂದು ನಾನಾರೀತಿಯಿಂದ ತಿರಸ್ಕಾರ ಮಾಡಿದನು.

**ಸ್ಕಂದ**:—ಮುನಿಗಳೇ, ಅತ್ತ ಲಂಕೆಯಿಂದ ರಾವಣನ ಶೋಧಾರ್ಥವಾಗಿ ವಸುಶ್ರವನೂ, ಬ್ರಹ್ಮನೂ, ಪೌಲಸ್ತ್ಯನೂ, ಮುನಿಗಳೂ, ದೇವತೆಗಳೂ ಮಾಹಿಷ್ಮತಿನಗರಕ್ಕೆ ಬಂದರು. ಅವರನ್ನು ನೋಡಿ ಸಹಸ್ರಾರ್ಜುನನು ಭಕ್ತಿಯಿಂದ ನಮಸ್ಕಾರಮಾಡಿ, ಉಚಿತಾಸನವಿತ್ತು ಕುಳ್ಳಿರಿಸಿ ಅರ್ಘ್ಯಪಾದ್ಯ ಆಚಮನಾದಿಗಳಿಂದ ವಿಧಿಪೂರ್ವಕವಾಗಿ ಪೂಜಿಸಿ ಕೈಮುಗಿದು ನಿಂತು ಇಂತೆಂದನು.

**ಕಾರ್ತವೀರ್ಯ**:—ಹೇ ಪ್ರಭುಗಳೇ, ನೀವು ಇಲ್ಲಿಗೆ ಬಂದ ಕಾರಣವೇನು? ಅದನ್ನು ದಯಮಾಡಿ ತಿಳಿಸಬೇಕು. ತಮ್ಮ ಆಜ್ಞೆ ಪ್ರಕಾರ ವರ್ತಿಸಲಿಕ್ಕೆ ನಾನು ಸಿದ್ಧನಿದ್ದೇನೆ.

**ಬ್ರಹ್ಮ**:—ಹೇ ಪ್ರಭೋ, ತ್ರೈಲೋಕಾಧಿಪತಿಯಾದ ಅರ್ಜುನನೇ ನಾನು ಬಂದ ಕಾರಣವನ್ನು ಹೇಳುತ್ತೇನೆ ಕೇಳು. ಅಜ್ಞಾನಿ ಮತ್ತು ಉನ್ಮತ್ತ ನಾದ ರಾವಣನೆಂಬ ನನ್ನ ಮೊಮ್ಮಗನು ನಿನ್ನ ಪಟ್ಟಣದಲ್ಲಿ ಎಲ್ಲಿಯೋ ಇರುವ ನಂತೆ ಅವನನ್ನು ಶೋಧಮಾಡಿಕೊಡಬೇಕು. ಇದೇ ನನ್ನ ವಾಂಛೆಯು.

**ಕಾರ್ತವೀರ್ಯ**:—ಹೇ ಸ್ವಾಮಿಯೇ, ಅವನು ನನ್ನೊಡನೇ ನಿಷ್ಕಾರಣ ಯುದ್ಧಕ್ಕೆ ಬಂದನು. ಯುದ್ಧದಲ್ಲಿ ನನ್ನಿಂದ ಹೊಡೆಯಲ್ಪಟ್ಟು ಗತ ಪ್ರಾಣನಾಗಿ ಬಿದ್ದನು. ಆಗ ನಾನು ಕನಿಕರದಿಂದ ಅವನಿಗೆ ಉಪಚಾರ ಮಾಡಿ, ಎಬ್ಬಿಸಿ ನನ್ನ ರಥದ ಕಂಬಕ್ಕೆ ಕಟ್ಟಿ ತಂದು, ಇಲ್ಲಿ ದಿಗಂಬರನನ್ನಾಗಿ

ಮಾಡಿ ಕಂಬಕ್ಕೆ ಕಟ್ಟಿಸಿದ್ದೇನೆ. ಅವನು ನಿಮ್ಮವನಾದರೆ ನೋಡಿಕೊಳ್ಳಿ ರೆಂದು, ಅವರನ್ನು ಕರಕೊಂಡು ಹೋಗಿ ತೋರಿಸಿದನು. ಆಗ ಕಂಬಕ್ಕೆ ಬತ್ತಲೆ ಕಟ್ಟಲ್ಪಟ್ಟ ರಾವಣನು, ಬ್ರಹ್ಮ ಮೊದಲಾದವರನ್ನು ಕಂಡು ನಾಚಿ ಕಂಬದ ಮರೆಗೆ ಮುಖಮಾಡಿಕೊಂಡು ನಿಂತನು. ಆಗ ಕಾರ್ತವೀರ್ಯನು ಖಡ್ಗದಿಂದ ಅವನಿಗೆ ಕಟ್ಟಿದ ಬಲವಾದ ಪಾಶಗಳನ್ನು ಕತ್ತರಿಸಿ, ಅವನಿಗೆ ವಸ್ತ್ರಾಭರಣಗಳನ್ನು ಕೊಟ್ಟು ಬ್ರಹ್ಮನಿಗೆ ಒಪ್ಪಿಸಿದನು. ಆಗ ಬ್ರಹ್ಮನು ಇಂತೆಂದು ರಾವಣನನ್ನು ನಿಂದಿಸಿದರು.

**ಬ್ರಹ್ಮ**:—ಎಲೈ ಮೂಢನಾದ ರಾವಣನೇ, ನೀನು ಸಹಸ್ರಾರ್ಜುನನ ಕೂಡ ಯುದ್ಧಕ್ಕೆ ಬಂದನು. ತರಗೆಲೆಯು ಕಾಡ್ಗಿಚ್ಚಿನೊಡನೆ ಶಣಿಸಿದಂತೆಯೂ, ಹೊನ್ನಿಹುಳವು ಸೂರ್ಯನೊಡನೆ ಶಣಿಸಿದಂತೆಯೂ, ಅಜವು ಗಜ ದೊಡನೆ ಶಣಿಸಿದಂತೆಯೂ ಮಹದಂತರವಾಗಿರುತ್ತದೆ. ಎಲೈ ಪಾಪಿಯೇ ನಿನ್ನ ಯೋಗ್ಯತೆಯನ್ನರಿಯದೆ ಕಾರ್ತವೀರ್ಯನ ಕೂಡ ಕಾದಿ, ಅವನಿಂದ ದಿಗಂಬರನಾಗಿ ಬಂಧಿಸಿಕೊಂಡದ್ದರಿಂದ ನಾನು ಅವನಿಂದ ನಿನ್ನನ್ನು ದಾನ ಬೇಡಬೇಕಾಯಿತು. ನಾನು ಸರ್ವ ದೇವತೆಗಳಲ್ಲಿ ಶ್ರೇಷ್ಠನು. ನನ್ನಿಂದಲೆ ಸರ್ವರು ತಮ್ಮ ವಾಂಛಿತವನ್ನು ಬೇಡಿಕೊಳ್ಳುತ್ತಾರೆ. ಹೀಗಿದ್ದು ಕುಲನಾಶಕನಾದ ನಿನಗೋಸ್ಕರ ನಾನು ಬೇಡಿಕೊಳ್ಳಬೇಕಾಯಿತು. ಮೂರ್ಖನೇ, ಸಹಸ್ರಾರ್ಜುನನೆಂದರೆ ಯಾರೆಂದು ತಿಳಿದಿರುವಿ ? ಮೂರು ಲೋಕವನ್ನು ಜಯಿಸಿದ, ಮಹಾಬಲಿಯಾದ ಮಧುದೈತ್ಯನ ರೂಪನೇ ಈ ಕಾರ್ತವೀರ್ಯನು.

---

## ೨೮ನೇ ಅಧ್ಯಾಯ

**ಸ್ಕಂದ**:—ಮುನಿಗಳೇ, ಹೀಗೆ ಪಿತಾಮಹನು ಅನೇಕ ವಿಧದಿಂದ ರಾವಣನನ್ನು ಹಳಿದರು. ಅವನು ನಾಚಿಕೆಯಿಂದ ಏನೂ ಮಾತಾಡದೆ ಸುಮ್ಮನೆ ತಲೆ ಕೆಳಗೆ ಮಾಡಿಕೊಂಡು ಕುಳಿತನು.

**ಪುಲಸ್ತ್ಯ**:—ಎಲೈ ಮೂರ್ಖನೆ, ಸಹಸ್ರಾರ್ಜುನನ ಸಾಮರ್ಥ್ಯವನ್ನು ತಿಳಿಯದೆ ಅವನೊಡನೆ ಶಣಿಸಿ, ನಮ್ಮ ಕುಲಕ್ಕೆ ಕಲಂಕವನ್ನು ಹಚ್ಚಿದಿ. ಸಹಸ್ರಾರ್ಜು

ನನು ಶಸ್ತ್ರಧಾರಿಯಾಗಿ ನಿಂತರೆ ಮೂರುಲೋಕದಲ್ಲಿ ಅವನೆದುರಿಗೆ ನಿಲ್ಲುವ ಸಮರ್ಥರು ಒಬ್ಬರೂ ಇಲ್ಲ. ಹೀಗಿದ್ದು ನೀನು ಅವನೊಡನೆ ಯುದ್ಧ ಮಾಡಿ ಅನರ್ಥ ಹೊಂದಿದಿ ಎಂದು ರಾವಣನನ್ನು ಹೇಳಿದರು.

**ಸ್ಕಂದ**:—ಈ ಮೇರೆಗೆ ಬ್ರಹ್ಮನೂ, ಪುಲ್ಯಸ್ತ್ಯನೂ ರಾವಣನನ್ನು ತಿರಸ್ಕರಿಸಿ, ಸಹಸ್ರಾರ್ಜುನನ್ನು ಅನೇಕ ಪ್ರಕಾರ ಸ್ತುತಿಸಿ ತಮ್ಮ ಸ್ಥಾನಕ್ಕೆ ಹೋಗಲು ಸಿದ್ಧರಾದರು. ಆಗ ಸಹಸ್ರಾರ್ಜುನನು ಬ್ರಹ್ಮನಿಗೆ ಕೈಮುಗಿದುಕೊಂಡು ಇಂತೆಂದನು.

**ಸಹಸ್ರಾರ್ಜುನ**:—ಹೇ, ಕಮಲೋದ್ಭವನೆ ಮೂರು ಲೋಕದಲ್ಲಿ ನಿನ್ನ ಸಮಾನ ಪ್ರತಾಪಶಾಲಿಗಳು ಯಾರೂ ಇಲ್ಲ. ನೀನೇ ಸೃಷ್ಟಿಕರ್ತನು. ನಿನ್ನ ಆಗಮನದಿಂದ ನಾನು ಧನ್ಯನಾದೆನು ಎಂದು ಬ್ರಹ್ಮನನ್ನು ಸ್ತುತಿಸಿ, ರಾವಣನಿಗೆ ಎಲೈ ರಾವಣನೇ, ನೀನು ಅವಿಚಾರದಿಂದ ಬಲವಂತರ ಕೂಡ ಕಣಿಸಬೇಡ. ಕಣಿಸಿದರೆ ನಾಶಹೊಂದುವಿ ಎಂದು ಬೋಧಿಸಿ, ಅವನನ್ನು ಬ್ರಹ್ಮನಿಗೆ ಒಪ್ಪಿಸಿ ಕಳುಹಿಸಿಕೊಟ್ಟನು. ಬ್ರಹ್ಮನು ಪುಲಸ್ತ್ಯನನ್ನೂ, ರಾವಣನನ್ನೂ, ಲಂಕಾಪಟ್ಟಣಕ್ಕೆ ಕಳುಹಿ, ಸುರಮುನಿಗಳೊಡನೆ ತನ್ನ ಸ್ಥಾನಕ್ಕೆ ಹೋದನು.

**ಸ್ಕಂದ**:—ಹೇ ಮುನಿಗಳೇ, ಮಹಾಬಲಿಷ್ಠನಾದ ರಾವಣನನ್ನು ಈ ಪ್ರಕಾರ ಯುದ್ಧದಲ್ಲಿ ಸಹಜವಾಗಿ ಗೆದ್ದು, ಅಪಮಾನಮಾಡಿದ ಅತ್ಯಂತ ವೀರನಾದ ಕಾರ್ತವೀರ್ಯನು ಸಕಲ ಐಶ್ವರ್ಯದಿಂದ ಸಭೆಯಲ್ಲಿ ಸಿಂಹಾಸನದ ಮೇಲೆ ಕೂತಂಥಾ ಕಾಲದೊಳಗೆ ನಾರದಮುನಿಯು ಬಂದು ರಾಜನಿಗೆ ಆಶೀರ್ವಾದಮಾಡಿ ಇಂತೆಂದು ನುಡಿದನು.

**ನಾರದ**:—ಹೇ ಪ್ರಭೋ, ಹೈಹಯಾಧಿಪನೇ, ಉತ್ತಮೋತ್ತಮನಾದ ಒಬ್ಬ ಋಷಿಯ ಶುಭವೃತ್ತಾಂತವನ್ನು ಹೇಳುತ್ತೇನೆ ಕೇಳು. ಅರಸನೇ, ಎಲ್ಲಿಯ ವರೆಗೆ ನೀನು ಜಮದಗ್ನಿಋಷಿಯ ಪುಣ್ಯಾಶ್ರಮವನ್ನು ನೋಡಲಿಲ್ಲವೋ ಅಲ್ಲಿಯ ವರೆಗೆ ಈ ನಿನ್ನ ಮೂರು ಲೋಕದ ಒಡೆತನ ಸಂಪತ್ತು ರಮ್ಯ ವಾಗಿ ತೋರುವದು. ಜಮದಗ್ನಿಯ ಆಶ್ರಮವನ್ನು ನೋಡಿದ ಮೇಲೆ ನಿನ್ನ ಸಂಪತ್ತು ಕಿಂಚಿತ್ತಾದರೂ ರಮ್ಯತೋರದು ಮತ್ತು ಯಾವಾಕೆಯು ದಾನಮಾನ ಅನ್ನೋದಕಗಳಿಂದ ಮೂರು ಲೋಕವನ್ನು ತೃಪ್ತಿಪಡಿಸು ವಳೋ ಅಂಥ ರೇಣುಕಾದೇವಿಯನ್ನು ನೀನು ಎಲ್ಲಿಯ ವರೆಗೆ ನೋಡುವ

ದಿದ್ದರೋ ಅಲ್ಲಿಯ ವರೆಗೆ ನಿನ್ನ ಸ್ತ್ರೀಯರು ನಿನಗೆ ರಮ್ಯವಾಗಿ ತೋರು ವರು. ರೇಣುಕಾದೇವಿಯ ದರ್ಶನವಾದ ಮೇಲೆ ರಮ್ಯತೋರರು. ರಾಜನೇ, ಬಹಳ ಹೇಳುವದೇನು ಮೂರು ಲೋಕದ ಸೌಂದರ್ಯವನ್ನು ತೆಗೆದುಕೊಂಡು ಈ ಆಶ್ರಮವು ರಚಿಸಲ್ಪಟ್ಟಿದೆಯೋ ಏನೋ ಅನ್ನುವಂತೆ ತೋರುತ್ತದೆ. ಇಂಥ ಜಮದಗ್ನಿ ಋಷಿಯ ಪುಣ್ಯಾಶ್ರಮವನ್ನು ನೋಡಿ ಪರಮಾನಂದಪಟ್ಟು ನಿನಗೆ ತಿಳಿಸಬೇಕೆಂದು ಬಂದೆನು. ಇನ್ನು ಹೋಗು ತ್ತೇನೆನ್ನಲು, ಹೈಹಯಾಧಿಪನು ನಾರದಮುನಿಯನ್ನು ಪೂಜಿಸಿ ಕಳುಹಿಸಿ ಕೊಡುವಂಥವನಾದನು. ಆಗ ನಾರದಮುನಿಯು ಅಲ್ಲಿಯೇ ಅಂತರ್ಧಾನ ನಾದನು. ಸಹಸ್ರಾರ್ಜುನನು ನಾರದಮುನಿಯಿಂದ ಜಮದಗ್ನಿಋಷಿಯ ಆಶ್ರಮದ ಆಶ್ಚರ್ಯಕಾರಕವಾದ ವಾರ್ತೆಯನ್ನು ಕೇಳಿ, ಅದನ್ನು ನೋಡ ಬೇಕೆಂಬ ಕುತೂಹಲದಿಂದ ತನ್ನ ಸರ್ವ ಸೇನಾ ಮತ್ತು ಪುತ್ರ, ಮಿತ್ರ, ಬಾಂಧವರಿಂದ ಸಮೇತನಾಗಿ ಬೇಟೆಯಾಡುತ್ತ ಋಷಿಯ ಆಶ್ರಮಕ್ಕೆ ಬಂದನು ಮತ್ತು ಅಲ್ಲಿ ವಾಸವಾಗಿದ್ದ ಹುಲಿ, ಕರಡಿ, ಸಿಂಹ, ಗಜ, ಹರಿಣ ಮೊದಲಾದ ಅನೇಕ ಪ್ರಾಣಿಗಳನ್ನು ವಧೆಮಾಡಿದನು. ಇವನು ಪ್ರಾಣಿ ಗಳನ್ನು ಹನನಮಾಡುವಾಗ ಅವು ದುಃಖದಿಂದ ಚೀರುತ್ತಿದ್ದವು. ಆ ಧ್ವನಿಯು ಆಶ್ರಮದಲ್ಲೆಲ್ಲ ತುಂಬಿತು. ಆದರೂ ಜಮದಗ್ನಿಯು ಕೇಳಿ ಸಹಸ್ರಾರ್ಜುನನ ಮೇಲೆ ಏನೂ ಕ್ರೋಧಮಾಡಲಿಲ್ಲ. ಯಾಕಂದರೆ ಇವನು ಮೊದಲೇ ಕ್ರೋಧವನ್ನು ಬಿಟ್ಟಿದ್ದನು. ಸಹಸ್ರಾರ್ಜುನ ನೃಪನು ತನ್ನ ಆಶ್ರಮಕ್ಕೆ ಬಂದದ್ದು ನೋಡಿ ಆನಂದಪಟ್ಟನು. ಕಾರ್ತವೀರ್ಯ ನಾದರೂ ಜಮದಗ್ನಿಋಷಿಯ ಪುಣ್ಯಾಶ್ರಮವನ್ನು ನೋಡಿ ಆಶ್ಚರ್ಯ ಚಕಿತನಾಗಿ ಅಹಹಾ, ಈ ಪುಣ್ಯಾಶ್ರಮದ ಮಹಾತ್ಮೆಯನ್ನು ವರ್ಣಿಸುವದು ಅಸಾಧ್ಯವು. ಇಲ್ಲಿ ಎಲ್ಲ ಪ್ರಾಣಿಗಳು ತಮ್ಮ ಸ್ವಭಾವಸಿದ್ಧ ವೈರವನ್ನು ಬಿಟ್ಟು ಪರಸ್ಪರ ಸ್ನೇಹದಿಂದ ಶಾಂತವಾಗಿರುವವು. ಇಲ್ಲಿ ವೃಕ್ಷಲತಾದಿ ಗಳು ಅಕಾಲದಲ್ಲಿ ಸಹ ಪತ್ರ ಪುಷ್ಪಫಲಾದಿಗಳಿಂದ ಶೋಭಿತವಾಗಿರುವವು. ಮತ್ತು ಈ ಆಶ್ರಮದಲ್ಲೆಲ್ಲ ಮಹಾತ್ಮರಾದ ಮುನಿಗಳು ವೇದಾಧ್ಯಯನ, ದೇವತಾರ್ಚನ, ಶಾಸ್ತ್ರಶ್ರವಣವನ್ನು ಮಾಡುತ್ತಿರುವದರಿಂದ ಇದು ಕೈಲಾಸ ದಂತೆ ತೋರುತ್ತದೆ ಎಂದು ಆ ಆಶ್ರಮವನ್ನು ಕಾರ್ತವೀರ್ಯನು ಸ್ತುತಿಸಿ ತನ್ನ ಜನರಿಗೆ ದೇ ಮಂತ್ರಿಮಾಂಡಲಿಕರಿರಾ, ಹೇ ದ್ವಿಜರೇ, ಈ ಮಹಾತ್ಮ

ನಾದ ಜಮದಗ್ನಿಋಷಿಯ ಆಶ್ರಮದ ಸೌಂದರ್ಯವನ್ನು ನೋಡಿದಿರಾ, ಇದು ಇಂದ್ರಭವನಕ್ಕಿಂತಲೂ ಶ್ರೇಷ್ಠವಾಗಿ ಕಾಣಿಸುತ್ತದೆ. ಇನ್ನು ಒಂದು ಸ್ಥಾನದಲ್ಲಿ ಇಲ್ಲೇ ಎಲ್ಲರೂ ಇಳಿದುಕೊಳ್ಳೋಣ.

**ಮಂತ್ರಿಗಳು**:—ಹೇ ಪ್ರಭೋ, ಇದು ಮಹಾತ್ಮರಾದ ಋಷಿಗಳ ಸ್ಥಾನವು. ಇಲ್ಲಿ ಎಲ್ಲ ಕಡೆಗೆ ಅಗ್ನಿಶಾಲೆಗಳೂ, ತಪಸ್ವಿಗಳ ಪರ್ಣಕುಟೀರಗಳೂ, ಇರುವವು. ಎಲ್ಲ ಕಡೆಯೂ ಪುರಾಣಶಾಸ್ತ್ರಗಳ ಮತ್ತು ವೇದಘೋಷಗಳ ಧ್ವನಿಯೇ ಕೇಳಬರುತ್ತದೆ. ಕಾರಣ ನಮ್ಮ ಸೇನೆಯೊಡನೆ ಕೂಡಿಕೊಂಡು ಇಲ್ಲಿರುವದು ಯೋಗ್ಯವಲ್ಲ. ನಾವು ಇಲ್ಲಿದ್ದರೆ ಮುನಿಗಳಿಗೆ ತೊಂದರೆ ಯಾಗುವದು.

---

## ೨೯ನೇ ಅಧ್ಯಾಯ

**ಸ್ಕಂದ**:—ಋಷಿಗಳೇ, ಸಹಸ್ರಾರ್ಜುನನಿಗೆ ಮಂತ್ರಿಗಳು ಆಶ್ರಮದಲ್ಲಿ ಇಳಿದು ಕೊಳ್ಳುವುದು ಸರಿಯಲ್ಲವೆಂದು ಹೇಳಿದರು. ಅವರ ಮಾತನ್ನು ಲಕ್ಷಕ್ಕೆ ತರದೆ ಬೇಟೆಯ ಬಲಸಮೇತನಾಗಿ ಆ ಆಶ್ರಮದಲ್ಲಿಯೇ ಇಳಿದುಕೊಂಡನು. ಅನಂತರ ಜಮದಗ್ನಿಋಷಿಯು, ಕಾರ್ತವೀರ್ಯನು ತನ್ನ ಆಶ್ರಮದಲ್ಲಿ ಪುತ್ರ, ಮಿತ್ರ, ಬಲಸಮೇತನಾಗಿ ಇಳಿದಿದ್ದಾನೆಂದು ಕೇಳಿ ರೇಣುಕಾದೇವಿಗೆ ಇಂತೆಂದನು.

**ಜಮದಗ್ನಿ**:—ಹೇ ದೇವಿ, ಕಾರ್ತವೀರ್ಯರಾಜನು ಬೇಟೆಯಾಡುವ ನಿಮಿತ್ತ ತನ್ನ ಸೇನಾಸಮೇತ ಬಂದು ದಣಿದು ನಮ್ಮ ಆಶ್ರಮದಲ್ಲಿ ಇಳಿದಿದ್ದಾನೆ. ಕಾರಣ ಮಹಾರಾಜನಾದ ಅತಿಥಿಗೋಸ್ಕರ ಏನು ಮಾಡತಕ್ಕದ್ದೆಂದು ನೀನು ಧರ್ಮವನ್ನು ಬಲ್ಲವಳಾದ್ದರಿಂದ ಯೋಚಿಸಿ ಶೀಘ್ರನಾಗಿ ಹೇಳು.

**ರೇಣುಕಾ**:—ಹೇ ಸ್ವಾಮಿಯೇ, ಅಭ್ಯಾಗತ ಅತಿಥಿಯು ಮಾನ್ಯಮಾಡಲಿಕ್ಕೆ ಮತ್ತು ಪೂಜಿಸಲಿಕ್ಕೆ ಯೋಗ್ಯನಿರುತ್ತಾನೆ. ಆದ್ದರಿಂದ ಈ ಮಹಾ ರಾಜನು ನಮ್ಮ ಆಶ್ರಮಕ್ಕೆ ಬಂದದ್ದರಿಂದ, ನಮಗೆ ಅತಿಥಿಗಳ ಸತ್ಕಾರ ಮಾಡುವದೇ ಗೃಹಸ್ಥಾಶ್ರಮದ ಮುಖ್ಯಧರ್ಮವು. ಕಾರಣ, ಕ್ಷುಧಿತನಾದ ರಾಜನು ಸೇನಾಸಮೇತನಾಗಿ ತೃಪ್ತಿಪಡಿಸುವದು ನಮ್ಮ ಕರ್ತವ್ಯವು.

ನೀವು ಶೀಘ್ರವಾಗಿ ಹೋಗಿ ರಾಜನಿಗೆ ಬಲಸಹಿತ ಆಮಂತ್ರಣಕೊಟ್ಟು ಬನ್ನಿರಿ. ನಾನು ಅವರಿಗೆ ಉಚಿತವಾದ ಸರ್ವಸಾಮಗ್ರಿಯನ್ನು ತ್ವರೆಯಿಂದ ತಯಾರಿಸಿ ಆದರಪೂರ್ವಕ ಸತ್ಕರಿಸುವೆನು.

---

## ೩೦ನೇ ಅಧ್ಯಾಯ

**ಸ್ಕಂದ:**—ಹೇ ಮುನಿಗಳೇ, ರೇಣುಕಾದೇವಿಯು ಈ ಪ್ರಕಾರ ಅನ್ನುತ್ತಿರಲಿಕ್ಕೆ ಜಮದಗ್ನಿಯು ಅರಸನ ಕಡೆಗೆ ಹೋಗಿ ಇಂತೆಂದನು.

**ಜಮದಗ್ನಿ:**—ಹೇ ನೃಪಶ್ರೇಷ್ಠನೇ, ನಿನಗೆ ಸ್ವಾಗತವು. ಭೂಪಾಲನೇ, ನಿನ್ನ ಸಕಲಸೇನಾಸಮೇತನಾಗಿ ದಯಮಾಡಿ ನನ್ನ ಗೃಹಕ್ಕೆ ಬಂದು ಭೋಜನ ಮಾಡಿ ನನ್ನ ಆದರಾಥಿತ್ಯವನ್ನು ಸ್ವೀಕರಿಸಬೇಕು.

**ಕಾರ್ತವೀರ್ಯ:**—ಹೇ ಮಹಾಮುನಿಯೇ, ಬ್ರಾಹ್ಮಣರಲ್ಲಿ ಪ್ರಸಾದ ಸೇವಿಸುವದು ಅತ್ಯಂತ ಸುಖಕ್ಕೆ ಕಾರಣವಾಗಿರುತ್ತದೆ. ರಾಜರಲ್ಲಿ ಭೋಜನವು ಆದರಾರ್ಥವಾಗಿರುತ್ತದೆ. ಕಾರಣ ನಾನು ಪವಿತ್ರನಾಗುವದಗೋಸ್ಕರ ಅವಶ್ಯವಾಗಿ ಭೋಜನಕ್ಕೆ ಬರುವೆನು.

**ಜಮದಗ್ನಿ:**—ದೊರೆಯೇ, ತಾವು ನಿತ್ಯದಲ್ಲಿ ಪರಮಪಕ್ವಾನ್ನ ಭೋಜನ ಮಾಡತಕ್ಕವರು. ತಾಪಸರಾದ ನಮ್ಮಲ್ಲಿ ಗಡ್ಡೆ, ಗೆಣಸು, ಫಲಗಳೇ ನಿತ್ಯದ ಭೋಜನದ ವಿಷಯವು. ಅದನ್ನೇ ಪ್ರೀತಿಯಿಂದ ಸೇವಿಸಿ, ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು ಎಂದು ರಾಜನಿಗೆ ಆಮಂತ್ರಣಕೊಟ್ಟು ಜಮದಗ್ನಿ ಋಷಿಯು ಆಶ್ರಮಕ್ಕೆ ತಿರುಗಿ ಬಂದು, ರೇಣುಕಾದೇವಿಗೆ ದೇವಿ, ನೀನು ಶೀಘ್ರವಾಗಿ ಪಾಕವನ್ನು ತಯಾರಿಸು. ನಾನು ತ್ವರಿತದಿಂದ ಸ್ನಾನಮಾಡಿಕೊಂಡು ಬರುವೆನು. ನಾನು ರಾಜನಿಗೆ ಬಲಸಹಿತ ಭೋಜನಕ್ಕೆ ಬರಬೇಕೆಂದು ನಿನ್ನ ಹೇಳಿಕೆಯಂತೆ ಹೇಳಿಬಂದೆನು.

**ರೇಣುಕಾ:**—ಹೇ ಸ್ವಾಮಿಯೇ, ತಾವು ಅದರ ಸಂಬಂಧ ಏನೂ ಚಿಂತೆ ಮಾಡಬಾರದು. ತಮ್ಮ ಪ್ರಸಾದದಿಂದ ಸರ್ವಸಾಮಗ್ರಿಗಳನ್ನು ಮೊದಲೇ ತಯಾರಿಸಿರುವೆನು.

**ಸ್ಕಂದ**:—ಋಷಿಗಳೇ, ಹೀಗೆ ರೇಣುಕಾದೇವಿಯು ಹೇಳಿದ ಕೂಡಲೇ ಜಮದಗ್ನಿಯು ಸಂತೋಷದಿಂದ ಬ್ರಾಹ್ಮಣರನ್ನೊಡಗೊಂಡು ಭಾಗೀರಥೀ ಸ್ನಾನಕ್ಕೆ ಹೋದನು. ಮಧ್ಯಾಹ್ನ ಸಮಯವಾಗುತ್ತಿರಲು, ಇತ್ತ ರಾಜನು ತನ್ನ ಚಾರರಿಗೆ ಜಮದಗ್ನಿಯ ಗೃಹದಲ್ಲಿ ಭೋಜನದ ವ್ಯವಸ್ಥೆ ಏನು ನಡೆದಿದೆ, ನೋಡಿಬನ್ನಿರೆಂದು ಅಪ್ಪಣೆಯನ್ನು ಕೊಟ್ಟಿದ್ದನು. ಅವರು ನೋಡಿ ತಿರುಗಿ ಬಂದರು.

**ಕಾರ್ತವೀರ್ಯ**:—ಹೇ ಚಾರರೇ, ಜಮದಗ್ನಿಋಷಿಗಳ ಗೃಹದಲ್ಲಿ ಏನೇನು ವ್ಯವಸ್ಥೆ ನಡೆದಿರುವದು? ಯಾವ ಯಾವ ತರದ ಅಡಿಗೆಯನ್ನು ಮಾಡಿರುವರು ಮತ್ತು ವ್ಯವಸ್ಥೆ ಮಾಡತಕ್ಕ ಜನರು ಎಷ್ಟು ಮಂದಿ ಇರುವರು? ಹಾಲು ಕೊಡತಕ್ಕ ಎಮ್ಮೆ, ಆಕಳುಗಳು ಎಷ್ಟಿರುವವು? ನೋಡಿದ್ದನ್ನು ಹೇಳಿರಿ.

**ಚಾರರು**:—ಹೇ ಮಹಾಪ್ರಭುವೇ, ಜಮದಗ್ನಿಋಷಿಯ ಗೃಹದಲ್ಲಿ ಅಡಿಗೆಯ ಸಾಮಗ್ರಿಯು ಏನೂ ಇಲ್ಲ. ಹೊಗೆಯು ಸಹಾ ಹಾಯುವದಿಲ್ಲ. ಧಾನ್ಯಾದಿಗಳೂ ತೋರುವದಿಲ್ಲ. ಫಲ, ಗಡ್ಡೆ, ಗೆಣಸು ಮೊದಲಾದುವೇನೂ ಇಲ್ಲ. ಒಂದು ಆಕಳು ಮಾತ್ರ ಇರುತ್ತದೆ. ಮಹಾಸ್ವಾಮಿಯೇ, ಆ ಮುನಿಯು ತಮ್ಮನ್ನು ವಂಚಿಸಿದನು. ಸಂದೇಹವಿಲ್ಲ ಎಂದು ಹೇಳಿದರು. ಅತ್ತ ಜಮದಗ್ನಿ ಋಷಿಯು ಸ್ನಾನಮಾಡಿಕೊಂಡು ತನ್ನ ಆಶ್ರಮಕ್ಕೆ ಬಂದು, ಭಕ್ತಿಪೂರ್ವಕವಾಗಿ ದೇವತಾರ್ಚನೆಯನ್ನು ಮಾಡಿ, ಕಾಮಧೇನುವಿನ ಬಳಿಗೆ ಹೋಗಿ, ತನ್ನ ವಾಂಛಿತಾರ್ಥಗಳನ್ನು ಬೇಡಿಕೊಂಡನು.

**ಜಮದಗ್ನಿ**:—ಹೇ ದೇವಿಯೇ, ದೇವೇಂದ್ರನು ದೇವತಾರ್ಥಿಗಳನ್ನು ತೃಪ್ತಿಪಡಿಸುವದಕ್ಕೆ ಸ್ವರ್ಗದಿಂದ ನಿನ್ನನ್ನು ಕಳುಹಿಸಿಕೊಟ್ಟಿದ್ದಾನೆ. ಈಗ ಬಲಸಹಿತ ಬಂದ ರಾಜನ ಸ್ವಾಗತ ಮಾಡಬೇಕಾಗಿದೆ. ಹೇ ತಾಯಿಯೇ, ಅದಕ್ಕೋಸ್ಕರ ಸರ್ವ ಪದಾರ್ಥಗಳನ್ನು ಪ್ರದಾನಮಾಡಬೇಕೆಂದು ಮುನಿಯು ಪ್ರಾರ್ಥಿಸಲು ಕಾಮಧೇನುವು ಸರ್ವಾಂಛಿತ ಪದಾರ್ಥಗಳನ್ನು ಕೊಡುವಂಥಾದ್ದಾಯಿತು. ಅಂದರೆ ಸರ್ವರಿಗೋಸ್ಕರ ಭವ್ಯವಾದ ಮಂಟಪವನ್ನೂ ವಿಚಿತ್ರವಾದ ವಸ್ತ್ರಾಭರಣಗಳನ್ನೂ, ಉತ್ತಮವಾದ ಆಸನಗಳನ್ನೂ, ಮನೋಹರವಾದ ಪಾತ್ರೆಗಳನ್ನೂ, ಸದ್ಗಂಧವನ್ನು ಬೀರ



ಶ್ರೀ ಜಮದಗ್ನಿ ಮಹರ್ಷಿಯೂ ಶ್ರೀ ರೇಣುಕಾದೇವಿಯೂ, ತಮ್ಮ ಆಶ್ರಮಕ್ಕೆ ಬಂದ ಕಾರ್ತವೀರ್ಯಾರ್ಜುನನ ಅತಿಥಿ ಸತ್ಕಾರ ಮಾಡುವದು

ತಕ್ಕ ಷಡ್ರಸಾನ್ನವನ್ನೂ ಮಧುರ ಪಾನೀಯವಸ್ತುಗಳನ್ನೂ ಆ ಮುನಿಗೆ ಪ್ರದಾನಮಾಡಿತು. ಆಗ ಮಹಾಪತಿವ್ರತಾಶಿರೋಮಣಿಯಾದ ರೇಣುಕಾ ದೇವಿಯು ಹಾಲಸಮುದ್ರವನ್ನೂ, ತುಪ್ಪದ ಸಮುದ್ರವನ್ನೂ, ಮೊಸರ ಸಮುದ್ರವನ್ನೂ ಸಕ್ಕರೆಯ ಸಮುದ್ರವನ್ನೂ ತನ್ನ ಆಶ್ರಮಕ್ಕೆ ಬರ ಮಾಡಿದಳು. ಮತ್ತು ಊಟೋಪಚಾರಗಳ ವ್ಯವಸ್ಥೆ ಮಾಡುವದ ಕ್ಕೋಸ್ಕರ ದೇವತೆಗಳೂ, ಸಿದ್ಧರೂ, ಗಂಧರ್ವರೂ, ಕಿನ್ನರರೂ, ಕಿಂಪುರು ಷರೂ ಮೊದಲಾದವರು ದೇವಿಯ ಆಜ್ಞೆಯಿಂದ ಸಿದ್ಧರಾಗಿ ಬಂದರು.

**ಸ್ಕಂದ:**— ಹೇ ಋಷಿಗಳೇ, ಈ ಪ್ರಕಾರ ಸರ್ವ ಸಾಮಗ್ರಿಯು ಸಿದ್ಧಸಾದ ಕೂಡಲೇ ಮಧ್ಯಾಹ್ನ ಸಮಯವಾಯಿತು. ಆಗ ಜಮದಗ್ನಿಯು ಸ್ವತಃ ಹೋಗಿ ವಿನಯದಿಂದ ಕಾರ್ತವೀರ್ಯನನ್ನು ಸಕಲ ಬಲಸಮೇತ ಕರೆದು ಕೊಂಡು ಬಂದು, ಉತ್ತಮಾಸನಗಳಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿ ಗಳಿಂದ ಪೂಜಿಸಿ ರತ್ನಖಚಿತವಾದ ಬಂಗಾರದ ಪಾತ್ರೆಗಳಲ್ಲಿ ರೇಣುಕಾ ದೇವಿಯೂ ತಾನೂ ಕೂಡಿ ಸರ್ವರಿಗೆಲ್ಲ ತೃಪ್ತಿಯಾಗುವಂತೆ ಷಡ್ರಸಾನ್ನ ವನ್ನೂ ಪಾನೀಯಗಳನ್ನೂ ಉಣಬಡಿಸಿ, ಕರ್ಪೂರವೀಳ್ಯವನ್ನಿತ್ತು ಉತ್ತಮ ವಾದ ವಸ್ತ್ರಾಭರಣಾದಿಗಳನ್ನು ಕೊಟ್ಟು ಆನಂದಪಡಿಸಿದರು. ಆಗ ಕಾರ್ತವೀರ್ಯನು ಇವರ ಅತ್ಯದ್ಭುತವಾದ ಕಾರ್ಯವನ್ನು ನೋಡಿ ಆಶ್ಚರ್ಯಭರಿತನಾಗಿ, ಅಹಹಾ ಈ ರೇಣುಕಾದೇವಿಯ ಸೌಂದರ್ಯವೂ, ಅನುಪಮವಾದ ಧೈರ್ಯವೂ, ಗಂಭೀರತೆಯೂ, ಮೂರು ಲೋಕದ ಸ್ತ್ರೀಯರಲ್ಲಿ ಅತ್ಯಂತ ಮಿಗಿಲಾದದ್ದು. ಸುರರು, ಗಂಧರ್ವರು, ಸಿದ್ಧರು ಮೊದಲಾದ ಮಹರ್ಷಿಗಳಿದ್ದಾರೆ. ಆದರೆ ಇವರಂಥಾ ಆತಿಥ್ಯಕೃತ್ಯವೂ ಅನ್ಯರಿಗೆ ಅಸಾಧ್ಯವಾದದ್ದು. ತಪಸ್ಸಿನಿಂದಲೂ, ಯಶಸ್ಸಿನಿಂದಲೂ, ಕೀರ್ತಿಯಿಂದಲೂ, ಆತಿಥ್ಯದಿಂದಲೂ, ಜಮದಗ್ನಿಋಷಿಗೆ ಸಮಾನರು ಮೂರು ಲೋಕದಲ್ಲಿ ಯಾರೂ ಇಲ್ಲ. ಹೇ ಜಗತ್ಪ್ರಭುವೇ, ಈ ತ್ರಿಲೋಕ ಮೋಹಕವಾದ ನಿನ್ನ ಅದ್ಭುತ ಮಹಿಮೆಯು ಮಂತ್ರದ ಸಾಮರ್ಥ್ಯವೋ ಅಥವಾ ತಪಸ್ಸಿನ ಬಲವೋ ಅಥವಾ ಇಂದ್ರಜಾಲ ವಿದ್ಯೆಯೋ ? ಯಾವ ದೇವನಿಂದ ಇಂಥ ಅಸಮಸಿದ್ಧಿಗಳು ನಿನಗೆ ಪ್ರಾಪ್ತ ವಾಗಿರುತ್ತವೆ ? ಹೇ ಮುನಿಯೇ, ಈ ಕಾಮಧೇನುವು ಈ ಕಲ್ಪವೃಕ್ಷವು ಈ ಚಿಂತಾಮಣಿಯು ನಿನಗೆ ಹೇಗೆ ಪ್ರಾಪ್ತವಾದವೆಂದು ನನಗೆ ಹೇಳಬೇಕು.

**ಜಮದಗ್ನಿ**:— ಹೇ ರಾಜನೇ ಕೇಳು, ಒಂದು ಕಾಲದಲ್ಲಿ ದೇವಶ್ರೇಷ್ಠನಾದ ಇಂದ್ರನು ನನ್ನ ಆಶ್ರಮವನ್ನು ನೋಡಲಿಕ್ಕೆ ಬಂದಿದ್ದನು. ಅವನು ಅತಿಥಿಗಳ ಪೂಜಾರ್ಥವಾಗಿ ಈ ಕಾಮಧೇನುವನ್ನು ನನಗೆ ಕೊಟ್ಟನು. ಇದರ ಪ್ರಸಾದದಿಂದ, ಹೇ ಪ್ರಭೋ ನಾವು ನಿನ್ನ ಆತಿಥ್ಯವನ್ನು ಮಾಡಿದೆವು.

---

## ೩೧ನೇ ಅಧ್ಯಾಯ

**ಸ್ಕಂದ**:— ಋಷಿಗಳಿರಾ, ಕಾರ್ತವೀರ್ಯನು ಈ ಪ್ರಕಾರ ರೇಣುಕಾದೇವಿಯನ್ನೂ, ಕಾಮಧೇನುವನ್ನೂ ವರ್ಣಿಸಿ, ಅಮೃತ ಸದೃಶವಾದ ಪಕ್ವಾನ್ನ ಭೋಜನಮಾಡಿ ಎದ್ದು, ಕಾಮಧೇನುವನ್ನು ಮೇಲಿಮೇಲೆ ನೋಡುತ್ತಾ ಹೋಗಿ ರಮ್ಯವಾದ ಆಸದನಲ್ಲಿ ನಿಟ್ಟುಸುರಿಕ್ಕುತ್ತ ಕುಳಿತುಕೊಂಡನು. ಆ ಮೇಲೆ ಜಮದಗ್ನಿಯು ಉತ್ತಮವಾದ ವಸ್ತ್ರಗಳನ್ನು ರತ್ನಖಚಿತವಾದ ಆಭರಣಗಳನ್ನೂ ರಾಜನಿಗೆ ಉಚಿತವಾಗಿ ಕೊಡಹೋಗಲು ಅರಸನು ಅವುಗಳನ್ನು ಗ್ರಹಣಮಾಡಲಿಲ್ಲ. ಆಗ ಋಷಿಯು ಖಿನ್ನನಾಗಿ ರೇಣುಕಾ ಸಹಿತ ಹಸ್ತಾಂಜಲಿಬದ್ಧನಾಗಿ ಅರಸನನ್ನು ಇಂತೆಂದು ಪ್ರಾರ್ಥಿಸಿದನು.

**ಜಮದಗ್ನಿ**:— ಹೇ ರಾಜನೇ, ಕೃಪೆಮಾಡಿ ನನ್ನ ಆತಿಥ್ಯವನ್ನು ಸಫಲಮಾಡು ನಾನು ಕೊಡತಕ್ಕ ಉಚಿತ ವಸ್ತುವನ್ನು ದಯಮಾಡಿ ಸ್ವೀಕರಿಸಬೇಕು, ನಿರಾಕರಣೆಮಾಡಬಾರದು.

**ಸ್ಕಂದ**:— ಈ ಪ್ರಕಾರ ಜಮದಗ್ನಿಯು ಪ್ರಾರ್ಥಿಸಲು, ಕಾಮಧೇನುವಿನ ಇಚ್ಛೆಯುಳ್ಳ ಕಾರ್ತವೀರ್ಯನು ಇಂತೆಂದನು.

**ಕಾರ್ತವೀರ್ಯ**:— ಹೇ ಮುನಿಯೇ, ಉತ್ತಮ ರೂಪವುಳ್ಳ ವಿಶೇಷ ಹಾಲು ಕೊಡತಕ್ಕ ತರುಣ ಹತ್ತುಲಕ್ಷ ಆಕಳುಗಳನ್ನು ನಿನಗೆ ಕೊಡುತ್ತೇನೆ, ಈ ಕಾಮಧೇನುವನ್ನು ನನಗೆ ಕೊಡು.

**ಜಮದಗ್ನಿ**:— ಹೇ ರಾಜನೇ, ಬಹುದಿವಸದ ಮತ್ತು ದೇವತೆಗಳಿಂದ ಪೂಜಿಸಲಿಕ್ಕೆ ಯೋಗ್ಯವಾದ ಕಾಮಧೇನುವನ್ನು ಯಾಕೆ ಇಚ್ಛಿಸುತ್ತಿ ? ಅನ್ಯವನ್ನೇನಾದರೂ ಬೇಡು.

**ಕಾರ್ತವೀರ್ಯ**:—ಹೇ ಮುನಿಯೇ, ಅರ್ಧರಾಜ್ಯವನ್ನು ಕೊಡುವೆನು, ಈ ಕಾಮಧೇನುವನ್ನು ಕೊಡು, ಅನ್ಯವೇನೂ ಬೇಡ.

**ಜಮದಗ್ನಿ**:—ಹೇ ರಾಜನೇ, ದೇವತಾ ಅತಿಥಿಗಳನ್ನು ತೃಪ್ತಿಪಡಿಸುವ ಗೋಸುಗವೇ ಈ ಕಾಮಧೇನುವನ್ನು ಇಂದ್ರನು ನನಗೆ ಕೊಟ್ಟಿದ್ದಾನೆ. ನಿತ್ಯದಲ್ಲಿ ಇದರ ಹಾಲು ತುಪ್ಪ, ಅಗ್ನಿಗೆ ಆಹುತಿಕೊಡಲಿಕ್ಕೂ, ಗೋಮಯ ಗೋಮೂತ್ರಗಳು ಗೃಹಶುದ್ಧಿಗೋಸ್ಕರವಾಗಿಯೂ ಉಪಯೋಗಿ ಸಲ್ಪಡುತ್ತವೆ. ಇಂಥ ಸತ್ಕರ್ಮಕ್ಕೆ ಮೂಲಕಾರಣವಾದ ಕಾಮಧೇನು ವನ್ನು ಹೇಗೆ ಇಚ್ಛಿಸುತ್ತೀ ?

**ಕಾರ್ತವೀರ್ಯ**:—ಹೇ ಮುನಿಯೇ, ಅತಿಥಿಯಾದ ನನಗೆ ಈ ಗೋವನ್ನು ನೀನು ವಂಚನೆ ಮಾಡತಕ್ಕದ್ದಲ್ಲ, ಪ್ರೀತಿಯಿಂದ ಕೊಡತಕ್ಕದ್ದು. ಅನ ವನ್ನು ಕಿಂಚಿತ್ತಾದರೂ ಇಚ್ಛಿಸೆನು.

**ದುರ್ವಾಸ**:—ಹೇ ಕಾರ್ತವೀರ್ಯನೇ, ನೀನು ರಾಜನಾಗಿ ಜಮದಗ್ನಿ ಮುನಿ ಯನ್ನು ಏನು ಪ್ರಾರ್ಥಿಸುತ್ತೀ ? ನೀನೇ ಬ್ರಾಹ್ಮಣರಿಗೆ ಉತ್ತಮವಾದ ದಾನ ವನು ಕೊಡತಕ್ಕದ್ದು. ಬ್ರಾಹ್ಮಣರು ಅಪರಾಧಿಗಳಾದರೂ ರಾಜರಿಂದ ರಕ್ಷಿಸಲಿಕ್ಕೆ ಯೋಗ್ಯರಿರುತ್ತಾರೆ. ಬ್ರಾಹ್ಮಣರ ಕ್ಷೋಭೆಯು ಸಂತಾನ ಕ್ಷಯಕಾರಕವಾದ ಘೋರವಿಷವು. ಕಾರಣ ಸಹಸ್ರಾರ್ಜುನನೇ ಇಂಥ ಘೋರವಿಷವನ್ನು ಪಾನಮಾಡಬೇಡ.

**ಸಹಸ್ರಾರ್ಜುನ**:—ಆದರೂ ಹೇ ಋಷಿಯೇ, ಈ ಜಮದಗ್ನಿ ರೇಣುಕಾದೇವಿ ಯರು ಈ ಕಾಮಧೇನುವನ್ನು ಪ್ರೀತಿಯಿಂದ ಅತಿಥಿಯಾದ ನನಗೆ ಕೊಡತಕ್ಕದ್ದು.

**ಜಮದಗ್ನಿ**:—ಹೇ ದೇವಿಯೇ, ಕಾರ್ತವೀರ್ಯನ ವಚನವನ್ನು ಕೇಳಿದಿಯಲ್ಲ, ಈಗ ಏನು ಮಾಡಬೇಕೆಂಬುದು ನಿನ್ನ ಮನಸ್ಸಿಗೆ ಬರುತ್ತದೆ ?

**ರೇಣುಕಾದೇವಿ**:—ಹೇ ಪ್ರಭೋ, ತಮ್ಮ ಮನಸ್ಸಿಗೆ ಬಂದದ್ದೇ ನನ್ನ ಮನಸ್ಸಿಗೆ ಬಂದದ್ದು, ಆದರೆ ಮನೆಗೆ ಬಂದ ಅತಿಥಿಗೆ ದುಷ್ಟಭಾಷಣ ಮಾಡುವದು ಅಯುಕ್ತವು.

**ಕಾರ್ತವೀರ್ಯ**:—ಹೇ ಮುನಿಯೇ, ಬಹಳ ಮಾತಿನಿಂದ ಏನು ಪ್ರಯೋ ಜನವು ? ನನ್ನ ಸರ್ವರಾಜ್ಯವನ್ನೂ ನಿನಗೆ ಕೊಡುವೆನು. ಈ ಕಾಮಧೇನು ವನ್ನು ನನಗೆ ಕೊಟ್ಟುಬಿಡು.

**ಸ್ಕಂದ:**— ಹೇ ಋಷಿಗಳೇ, ಕಾರ್ತವೀರ್ಯನ ಈ ನುಡಿಗಳನ್ನು ಕೇಳಿ ಸರ್ವ ಮುನಿಗಳೂ ನಿಶಿತವಾದ ಬಾಣಬಡೆದಂತೆ ಅತ್ಯಂತ ದುಃಖವಾಯಿತು. ಆಗ ಮಹಾಪ್ರತಾಪಶಾಲಿಯಾದ ಋಚಿಕ ಮುನಿಯು ಆಸನದಿಂದ ಎದ್ದು ಜಮದಗ್ನಿಯು ಕಾಮಧೇನುವನ್ನು ಬೇಡತಕ್ಕ ಕಾರ್ತವೀರ್ಯನಿಗೆ ಇಂತೆಂದನು.

**ಋಚಿಕ:**—ಹೇ ನೃಪಶ್ರೇಷ್ಠನೇ, ನೀನು ಹೀಗೆ ನುಡಿಯಬಾರದು. ಜಮದಗ್ನಿಯು ಕ್ರೋಧರಹಿತನೂ, ಶಾಂತನೂ, ಶುಚಿಯೂ, ಜ್ಞಾನಿಗಳಲ್ಲಿ ಮುಖ್ಯನೂ, ಪರೋಪಕಾರಿಯೂ ಇದ್ದಾನೆ. ಇಂಥ ಮುನಿಯು ಮನ ನೋಯುವಂತೆ ಅವನ ಧೇನುವನ್ನು ಯಾಕೆ ಛಲದಿಂದ ಇಚ್ಛಿಸುವಿ ?

**ಕಾರ್ತವೀರ್ಯ:**—ಹೇ ಋಚಿಕ ಮುನಿಯೇ, ನಿರರ್ಥಕವಾಗಿ ಯಾಕೆ ಮಾತಾಡುತ್ತೀ? ಗೌತಮಿೂ ನದಿಯು ನಿನ್ನ ಶಾಪಭಯದಿಂದ ಎರಡು ಭಾಗವಾಯಿತು, ಅದರಂತೆ ನನ್ನನ್ನು ತಿಳಿಯಬೇಡ.

**ವಿಶ್ವಾಮಿತ್ರ:**—ಹೇ ನೃಪನೇ, ಬ್ರಹ್ಮದ್ವೇಷವು ಯುಕ್ತವಲ್ಲ. ಅವರ ತಪಸ್ತೇಜದ ಸಾಮರ್ಥ್ಯವು ಅಗಾಧವಿರುತ್ತದೆ. ಪೂರ್ವದಲ್ಲಿ ಸಗರನೆಂಬ ಪ್ರಸಿದ್ಧ ರಾಜನ ಸಂಬಂಧಿಕರು ಕಳಕೊಂಡ ಕುದುರೆಯನ್ನು ಹುಡುಕಲಿಕ್ಕೆ ಭೂಲೋಕ, ಸ್ವರ್ಗಲೋಕಗಳಲ್ಲಿ ಸಂಚರಿಸಿ ಕಾಣದೆ, ಕಡೆಗೆ ಪಾತಾಳದಲ್ಲಿ ಹೋಗಿ ನೋಡಲು ಅಲ್ಲಿನ ಸಮಾಧಿಸ್ಥನಾಗಿ ಕುಳಿತಿದ್ದ ಕಪಿಲನೆಂಬ ಮಹಾಯೋಗಿಯ ಹಿಂಭಾಗದಲ್ಲಿ ಅಶ್ವವು ಬಂಧಿಸಿರಲು ವಿಚಾರಮಾಡದೆ, ಈ ಮುನಿಯೇ ಅಶ್ವವನ್ನು ಕಳವಿನಿಂದ ತಂದಿದ್ದಾನೆಂದು ತಿಳಿದು ಅವನಿಗೆ ತ್ರಾಸಕೊಡಲು, ಮುನಿಯ ಸಮಾಧಿಯು ಭಂಗವಾಗಿ ಕ್ರೋಧದೃಷ್ಟಿಯಿಂದ ಸಗರರನ್ನು ಭಸ್ಮಮಾಡಿದನು. ಕಾರಣ ಅರಸನೇ, ಮುನಿಗಳ ದ್ವೇಷವು ಮಹಾ ಹಾನಿಕಾರಕವು.

**ಸಹಸ್ರಾರ್ಜುನ:**—ಹೇ ಮುನಿಯೇ, ಇದಕ್ಕೆ ನಾನು ಹೆದರುವವನಲ್ಲ. ಸರ್ವಸುರರು, ಅಸುರರು, ಬಲಿಷ್ಠರಾದ ಋಷಿಗಳು ನೋಡುವಂತೆ ಕಾಮಧೇನುವನ್ನು ಬಲಾತ್ಕಾರದಿಂದ ಒಯ್ಯುತ್ತೇನೆ. ಪ್ರತಿಬಂಧಕ ಮಾಡುವ ಸಾಮರ್ಥ್ಯವುಳ್ಳವರು ಪ್ರತಿಬಂಧ ಮಾಡಲಿ.

**ಅಗಸ್ತ್ಯ:**—ಎಲೈ ರಾಜನೇ, ಬ್ರಾಹ್ಮಣ ಶ್ರೇಷ್ಠರ ಸಾಮರ್ಥ್ಯವು ಅತ್ಯದ್ಭುತವಾದದ್ದು. ಪೂರ್ವದಲ್ಲಿ ವೇಣು, ವಸು, ನಹುಷ ಮೊದಲಾದ ಎಷ್ಟೋ

ಮಹಾಪರಾಕ್ರಮಶಾಲಿಗಳಾದ ರಾಜರು ಮಹಾತ್ಮರ ಶಾಪದಿಂದ ಬಹು ಕಷ್ಟವನ್ನು ಅನುಭವಿಸಿದ್ದಾರೆ. ಮಹಾತ್ಮರಿಗೆ ಕ್ಷೋಭವನ್ನುಂಟುಮಾಡಿ ಸುಖಪಟ್ಟವರು ಮೂರುಲೋಕದಲ್ಲಿಯೂ ಇಲ್ಲ. ಕಾರಣ, ಧರ್ಮಿಷ್ಠ ನಾದ ಜಮದಗ್ನಿಗೆ ನೀನು ಕ್ಷೋಭವನ್ನುಂಟುಮಾಡುವದು ಅನುಚಿತವು. ಇದರಿಂದ ನಿನಗೆ ಮಹಾ ಅನರ್ಥವು ನಿಜವಾಗಿ ಸಂಭವಿಸುವದು.

**ಸಹಸ್ರಾರ್ಜುನ**:—ಹೇ ಮುನಿಯೇ, ರಾಜರು ರಾಜರನ್ನು ಹೊಗಳುವದೂ, ಬ್ರಾಹ್ಮಣರು ಬ್ರಾಹ್ಮಣರನ್ನು ಹೊಗಳುವದೂ ಸ್ವಭಾವಸಿದ್ಧವಾಗಿದೆ. ಬ್ರಾಹ್ಮಣರು ವೈಶ್ಯ, ಶೂದ್ರರು, ಕ್ಷತ್ರಿಯರನ್ನು ಆಶ್ರಯ ಮಾಡಿಕೊಂಡು ಬಾಳುವರು. ದಾನಶೂರರೂ, ಯುದ್ಧಶೂರರೂ, ಬಲವಂತರೂ ಕ್ಷತ್ರಿ ಯರೇ. ಬ್ರಾಹ್ಮಣರಿಗೆ ಶೌರ್ಯ ತೇಜ ದಾನ ಬಲಾದಿಗಳೆಲ್ಲಿಯವು.

**ವಶಿಷ್ಠ**:—ಎಲೈ ಭೂಪನೇ, ಅನೇಕ ದೃಷ್ಟಾಂತಗಳನ್ನು ಕಂಡೂ ಕೇಳಿಯೂ ನೀನು ಹೀಗೆ ಛಲಹಿಡಿಯುವದು ಯೋಗ್ಯವಲ್ಲ. ನಿಶ್ಚಯವಾಗಿ ನೀನು ನಾಶಹೊಂದುವಿ.

**ಸಹಸ್ರಾರ್ಜುನ**:—ಹೇ ದ್ವಿಜರೇ, ರಾಜರು ಅತಿಥಿಗಳಾಗಿ ಬಂದರೆ ಅವರಿಗೆ ಬ್ರಾಹ್ಮಣರು ವಸ್ತ್ರ, ಆಭರಣ, ಧನ, ಗೋ ಮಹಿಷ್ಯಾದಿಗಳನ್ನು ಆನಂದ ದಿಂದ ಕೊಡತಕ್ಕದ್ದು. ಆದ್ದರಿಂದ ಸುರಕ್ಷಿತವಾಗಿ ಇರಬೇಕಾದರೆ ಈ ಮುನಿಯು ಈ ಕಾಮಧೇನುವನ್ನು ನನಗೆ ಕೊಡಬೇಕು. ಇಲ್ಲದಿದ್ದರೆ ಜಮದಗ್ನಿ ಸಹಿತ ನಿಮ್ಮೆಲ್ಲರ ನಾಶವಾಗುವದು ನಿಶ್ಚಯವು ಎನ್ನಲು ಪಾಪನಾಶಕಳಾದ ಏಕವೀರಾದೇವಿಯು ಇಂತೆಂದಳು.

**ರೇಣುಕಾದೇವಿ**:—ಹೇ ಪ್ರಭೋ ಹೈಹಯಾಧಿಪನೇ, ಬ್ರಾಹ್ಮಣರನ್ನು ನಾಶ ಮಾಡುವೆನೆಂಬ ನಿನ್ನ ವಚನವು ಗರ್ವಿತವಾದದ್ದು. ಮಹಾತ್ಮರಾದ ಬ್ರಾಹ್ಮಣರ ಪಾದಧೂಳಿಯಿಂದ ಸಕಲ ವಿಪತ್ತುಗಳು ನಾಶವಾಗಿ ಸಕಲ ಸಂಪತ್ತು ಪ್ರಾಪ್ತವಾಗುವದು. ಧರ್ಮವೇ ಸುಖಕ್ಕೆ ಕಾರಣವಾದದ್ದು. ಮಹಾತ್ಮರ ಇಚ್ಛೆಯನ್ನು ತೃಪ್ತಿಪಡಿಸುವದೇ ಪರಮಧರ್ಮವು. ಮಹರ್ಷಿ ಯರ ಇಚ್ಛೆಯ ವಿರುದ್ಧ ವರ್ತಿಸುವದೇ ಮಹಾಪಾಪವು. ಹೇ ಮಗನೇ, ನೀನು ಸರ್ವಧರ್ಮ ಬಲ್ಲವನಾಗಿದ್ದೀ. ವಿಚಾರಿಸಿ ನೋಡಿ ಧರ್ಮ ಮಾರ್ಗವನ್ನು ಅನುಸರಿಸು.

**ಸ್ಕಂದ**:—ಹೇ ಋಷಿಗಳೇ ಈ ಪ್ರಕಾರ ಜಗಜ್ಜನನಿಯಾದ ರೇಣುಕಾದೇವಿಯ ಅಮೃತಮಯವಾದ ವಚನವನ್ನು ಕೇಳಿದರೂ, ಮರಣಸಮಯ ಪ್ರಾಪ್ತ ವಾದ ರೋಗಿಗೆ ಉತ್ತಮ ಔಷಧದಲ್ಲಿ ದ್ವೇಷಬುದ್ಧಿ ಬರುವಂತೆ, ಕಾರ್ತ ವೀರ್ಯನಿಗೆ ಆ ವಚನವು ರುಚಿಸಲಿಲ್ಲ.

**ಗೌತಮ**:—ಹೇ ನೃಪಶಾರ್ದೂಲನೇ, ದ್ವಿಜರ ಸಾಮರ್ಥ್ಯವು ಅತಿಶಯ ವಾದದ್ದು. ಯಾಕಂದರೆ ಅದು ಶುದ್ಧ ಧರ್ಮದ ಫಲವಾಗಿರುತ್ತದೆ. ಮೂರು ಲೋಕಗಳನ್ನು ವಶಮಾಡಿಕೊಂಡು ಆಳುವವನ ಸಾಮರ್ಥ್ಯ ಕ್ಕಿಂತಲೂ ಮೂರು ಕರಣಗಳನ್ನು ವಶಮಾಡಿಕೊಂಡ ಧರ್ಮನಿಷ್ಠನಾದ ಮುನಿಯ ಸಾಮರ್ಥ್ಯವು ಅಪ್ರತಿಮವಾಗಿರುತ್ತದೆ. ಇಂಥ ಮಹಾತ್ಮರಿಗೆ ಯಾರದೂ ಭೀತಿ ಇರುವುದಿಲ್ಲ. ಪಾಪವೊಂದೇ ಇವರಿಗೆ ಭೀತಿಯು. ಕಾರಣ ಸರ್ವಮುನಿಗಳ ಸಹವಾಗಿ ಜಮದಗ್ನಿಯನ್ನು ನಾಶಮಾಡುವೆನೆಂಬ ನಿನ್ನ ಅಹಂಕಾರದ ವಾಕ್ಯವು, ಅವರು ಅಧರ್ಮಕ್ಕೆ ಹೆದರುವದರಿಂದಲೇ ಶೋಭಿತವಾಗಿದೆ. ಈ ಅಗಸ್ತ್ಯ, ವಶಿಷ್ಠ, ವಿಶ್ವಾಮಿತ್ರ, ದುರ್ವಾಸ, ಮಾಂಡವ್ಯ, ಋಚಿಕ, ಜಮದಗ್ನಿ ಮೊದಲಾದವರ ಅನೇಕ ಅಘಟಿತ ಕೃತ್ಯಗಳನ್ನು ನೀನು ನೋಡಿಯೂ ಹೀಗೆ ವರ್ತಿಸುವದು ಯುಕ್ತವಲ್ಲ.

**ಕಾರ್ತವೀರ್ಯ**:—ಹೇ ಗೌತಮಮುನಿಯೇ, ನಿರರ್ಥಕವಾಗಿ ಯಾಕೆ ಮಾತಾಡುವಿ ? ನಾನು ಕಾಮಧೇನುವನ್ನು ಬಿಡುವದಿಲ್ಲ. ಎಲೋ ಜಮದ ಗ್ನಿಯೇ, ಕಾಮಧೇನುವನ್ನು ಸಂತೋಷದಿಂದ ಕೊಡುವಿಯೋ ಇಲ್ಲವೋ ಹೇಳು. ಇಲ್ಲದಿದ್ದರೆ ನಾನು ಅದನ್ನು ಬಲಾತ್ಕಾರದಿಂದ ಒಯ್ಯುವೆನು.

**ಜಮದಗ್ನಿ**:—ಹೇ ರಾಜನೇ, ಬಲಾತ್ಕಾರದಿಂದ ಕಾಮಧೇನುವನ್ನು ನೀನು ಒಯ್ಯುವಿಯಾದರೆ ಒಯ್ಯಬೇಕು. ನೀನು ತ್ರಿಲೋಕಶೂರನು, ಮಾನ್ಯನು, ಪೂಜ್ಯನು, ಅತಿಥಿಯು. ಶೀಘ್ರವಾಗಿ ನಿನ್ನ ಮನಸ್ಸಿಗೆ ಬಂದಂತೆ ಮಾಡ ಬೇಕು.

**ರೇಣುಕಾದೇವಿ**:—ಎಲೈ ಮಗನೇ, ಸಹಸ್ರಾರ್ಜುನನೇ ನೀನು ಅಶ್ವಮೇಧ ಮೊದಲಾದ ಸಾವಿರಾರು ಯಜ್ಞಗಳನ್ನು ಮಾಡಿ ದೇವತೆಗಳನ್ನು ತೃಪ್ತಿ ಪಡಿಸಿದ ಮಹಾತ್ಮನು, ಧರ್ಮಜ್ಞನು. ಈಗ ನೀನು ನಮಗೆ ಅತಿಥಿಯು. ನಿನ್ನನ್ನು ತುಷ್ಟಿಪಡಿಸುವದು ನಮ್ಮ ಕರ್ತವ್ಯವು. ಕಾರಣ ಕಾಮಧೇನು,

ಕಲ್ಪವೃಕ್ಷ ಮೊದಲಾದವುಗಳು ನಿನ್ನ ಮನಸ್ಸಿಗೆ ಯೋಗ್ಯ ಕಂಡರೆ ತೆಗೆದು ಕೊಂಡು ಹೋಗಬಹುದು.

**ಸ್ಕಂದ:**—ಋಷಿಗಳೇ, ಈ ರೇಣುಕಾದೇವಿಯ ವಿನಯವಾಕ್ಯಗಳನ್ನು ಕೇಳಿ ದುರ್ಮತಿಯಾದ ಕಾರ್ತವೀರ್ಯನು ಏನೂ ಮಾತಾಡದೆ ಸುಮ್ಮನಾದನು. ಆಗ ಕಾಮಧೇನುವು ತನಗೆ ರೇಣುಕಾದೇವಿ ಜಮದಗ್ನಿ ಋಷಿಗಳ ಸಹಾಯ ಸಿಗದಂತೆ ದುಃಖದಿಂದ ಅಗ್ನಿಶಾಲಿಯನ್ನು ಪ್ರವೇಶಿಸಿ, ಅಲ್ಲಿದ್ದ ಗಾರ್ಹ ಪತ್ಯಾದಿ ಅಗ್ನಿಗಳಿಗೆ ಇಂತೆಂದುದು.

**ಕಾಮಧೇನು:**—ಹೇ ಅಗ್ನಿಗಳೇ, ಬಲಾತ್ಕಾರದಿಂದ ಕಾಮಧೇನುವನ್ನು ಒಯ್ಯುವೆನೆಂಬ ಈ ದುಷ್ಟರಾಜನ ವಾಕ್ಯವನ್ನು ನೀವು ಕೇಳುವಂತವ ರಾದಿರಿ. ಆದರೆ ಸುರರೇ, ನಾನು ನಿಮ್ಮವಳು. ಆ ನೀಚನ ಗೃಹಕ್ಕೆ ನಾನು ಹೋಗುವುದಿಲ್ಲ. ನನ್ನ ಗರ್ಭದಲ್ಲಿ ದೇವತೆಗಳೂ, ಋಷಿಗಳೂ, ವೇದಗಳೂ, ಯಜ್ಞಗಳೂ ಇರುತ್ತವೆ. ನನ್ನನ್ನು ಬಲಾತ್ಕಾರದಿಂದ ಒಯ್ಯುವದು ಕಾರ್ತವೀರ್ಯನಿಂದ ಎಂದೂ ಆಗದು. ಜಮದಗ್ನಿಯು ಕ್ರೋಧವನ್ನು ಬಿಟ್ಟದ್ದರಿಂದ ನಿರ್ವೀರ್ಯನಾಗಿದ್ದಾನೆ. ನಾನು ಈಗ ಏನು ಮಾಡಬೇಕೆಂಬುದನ್ನು ನೀವು ದಯಮಾಡಿ ಹೇಳಬೇಕು.

**ಅಗ್ನಿಗಳು:**—ಹೇ ದೇವಿಯೇ, ಏನು ಮಾಡಬೇಕೆಂಬುವದು ನಮಗೆ ತಿಳಿ ಯದು. ನೀನು ಸರ್ವದೇವಮಯಳು, ನೀನೇ ವಿಚಾರಿಸು.

**ಕಾಮಧೇನು:**—ಈ ಕ್ರೂರ ಕಾರ್ತವೀರ್ಯನು, ನನ್ನನ್ನು ಬಲಾತ್ಕಾರ ದಿಂದ ಒಯ್ಯಲಿಕ್ಕೆ ಇಚ್ಛಿಸುತ್ತಾನೆ. ಆದ್ದರಿಂದ ನನ್ನ ಮನಸ್ಸಿನೊಳಗೆ ತೋರಿದ ಪ್ರಕಾರ ನಾನು ಮಾಡುವೆನು.

**ಅಗ್ನಿಗಳು:**—ಹೇ ತಾಯಿಯೇ, ಜಮದಗ್ನಿಋಷಿಯನ್ನು ಕಂಡು, ಉಚಿತ ವಾದದ್ದನ್ನು ಮಾಡು. ಕಾರ್ತವೀರ್ಯನು ಜಮದಗ್ನಿಋಷಿಯ ಅತಿಥಿಯು, ಪೂಜ್ಯನು ಮತ್ತು ಸಮರದಲ್ಲಿ ದುರ್ಜಯನಿದ್ದಾನೆ. ಮುಖ್ಯವಾಗಿ ಜಮ ದಗ್ನಿಯಿಂದ ಪೂಜಿಸಲ್ಪಡಲಿಕ್ಕೆ ಯೋಗ್ಯನಿದ್ದಾನೆ.

**ಸ್ಕಂದ:**—ಹೇ ಋಷಿಗಳೇ, ಈ ಪ್ರಕಾರ ಅಗ್ನಿಗಳು ಹೇಳಲು, ಕಾಮಧೇನುವು ಸಿಟ್ಟಿನಿಂದ ಜಮದಗ್ನಿಯ ಕಡೆಗೆ ಹೋಗಿ ಭೀತಿಯಿಂದ ದುಃಖಮಾಡ ಲಾರಂಭಿಸಿತು ಮತ್ತು ಕ್ರೋಧರಹಿತನಾದ ಶಾಂತನಾದ ಜಮದಗ್ನಿಯನ್ನು ನೋಡಿ ನಕ್ಕು, ಕ್ರೋಧದಿಂ ಹೀಗೆ ಅಂದಿತು.

**ಕಾಮಧೇನು:**—ಹೇ ಸ್ವಾಮಿಯೇ, ನೀನು ಈ ದುಷ್ಟನಾದ ಕಾರ್ತವೀರ್ಯ ನನ್ನು ಕೋಪದಿಂದ ಯಾಕೆ ಸಂಹರಿಸುವದಿಲ್ಲ. ಹೇ ಪ್ರಭೋ, ಈಗ ನಾನು ಏನು ಮಾಡಬೇಕೆಂಬುವವನ್ನು ಸೂಚಿಸು.

**ಜಮದಗ್ನಿ:**—ಹೇ ದೇವಿಯೇ, ಮನೆಗೆ ಬಂದಂಥ ಅತಿಥಿಯು ದುಷ್ಟರಾದರೂ ಪೂಜ್ಯನೇ, ಈ ಕಾರ್ತವೀರ್ಯನಾದರೋ ಅತಿಥಿಯೂ, ತ್ರೈಲೋಕ್ಯಾಧಿ ಪತಿಯೂ ಇದ್ದಾನೆ. ಕಾರಣ ಪೂಜಿಸಲಿಕ್ಕೆ ಯೋಗ್ಯನಲ್ಲದೆ, ಘಾತಮಾಡ ಲಿಕ್ಕೆ ಯೋಗ್ಯನಲ್ಲ.

**ಸ್ಕಂದ:**—ಮುನಿಗಳೇ, ಜಮದಗ್ನಿಯು ಈ ಪ್ರಕಾರ ಹೇಳಿದ್ದನ್ನು ಕೇಳಿ ಕಾಮ ಧೇನುವು ಸಹಿಸದೆ, ರೋಷದಿಂದ ಹೂಂಕರಿಸಲು ಆ ಹೂಂಕೃತಿಯಿಂದ ೫ ಪ್ರಲಯಾಗ್ನಿ ಸಮಾನರಾದ ಮತ್ತು ಕಾಲಮೃತ್ಯು ಸದೃಶರಾದ ಅಸಂಖ್ಯ ನರರು ಅನೇಕ ಪ್ರಕಾರದ ಆಯುಧಗಳಿಂದ ಸಹಿತರಾಗಿ ಉದಯವಾದರು. ಆ ಧೇನುವಿನ ಮುಖದಿಂದ ಕಿರಾತರೂ, ಕಣ್ಣುಗಳಿಂದ ಮ್ಲೇಚ್ಛರೂ, ಶ್ರೋತ್ರಗಳಿಂದ ಬರ್ಬರರೂ, ಶಸ್ತ್ರಪಾಣಿಗಳಾಗಿ ಜನಿಸಿದರು. ಅದರ ಮೂತ್ರರಂಧ್ರದಿಂದ ಕಾಡಿಗೆಬೆಟ್ಟದಂತೆ ಶರೀರವುಳ್ಳ ದ್ರಾವಿಡರೂ, ಗುದ ದಿಂದ ಮಹಾವೀರರಾದ ಪುಂಡ್ರಕರರೂ ಶಸ್ತ್ರಪಾಣಿಗಳಾಗಿ ಜನಿಸಿ ಕಾರ್ತ ವೀರ್ಯನನ್ನೂ ಅವನ ಬಲವನ್ನೂ ಭೀಕರವಾಗಿ ದುಃಖಪಡಿಸತೊಡಗಿ ದರು. ಆಗ ಕಾರ್ತವೀರ್ಯನು ಕೋಪದಿಂದ ತನ್ನ ಸೇನಾ ಸಮೇತ ನಾಗಿ ಆ ಕಾಮಧೇನುವಿನಿಂದ ಉದ್ಭವರಾದ ಭಟರೊಡನೆ ಘೋರ ಯುದ್ಧ ವನ್ನು ಮಾಡಿದನು. ಕಾಮಧೇನುವಿನ ಶರೀರದಿಂದ ಹುಟ್ಟಿದ ಕಾಲ ಸಮಾನರಾದ ಭಟರು, ಭೀಕರ ಸ್ವರೂಪವನ್ನು ತಾಳಿ, ಬಾಯಿತೆರೆದು, ಕಾರ್ತವೀರ್ಯನ ಆನೆ, ಕುದುರೆ, ರಥ ಪದಾತಿಗಳನ್ನು ನುಂಗುತ್ತಲೂ, ಶಸ್ತ್ರಾಸ್ತ್ರಗಳಿಂದ ಹೊಡೆಯುತ್ತಲೂ ಸಕಲ ಸೇನೆಯನ್ನು ನಾಶಮಾಡಿದರು. ಕಾಮಧೇನುವು ಅತ್ಯಂತ ಕೋಪದಿಂದ ಕಾರ್ತವೀರ್ಯನ ಬಂಧು ಗಳನ್ನೂ, ಸುತರನ್ನೂ, ಮಂತ್ರಿಗಳನ್ನೂ ಕೋಡಿನಿಂದ ಇರಿದು ಧ್ವಂಸ ಮಾಡಿತು. ಹೀಗೆ ತನ್ನ ಸೇನೆಯೂ, ಬಂಧುಗಳೂ, ಮಕ್ಕಳೂ, ಮಂತ್ರಿ ಗಳೂ ನಾಶವಾದದ್ದನ್ನು ಕಾರ್ತವೀರ್ಯನು ಮಹಾಕೋಪಾಟೋಪ ದಿಂದ, ಇಷ್ಟೆಲ್ಲ ಹಾನಿಯು ಈ ಮುನಿಯಿಂದಲೇ ಸಂಭವಿಸಿತು, ಇವನನ್ನೇ ಈಗ ಕೊಲ್ಲುವೆನೆಂದು ಜಮದಗ್ನಿಯ ಕಡೆಗೆ ಬರಲು, ಕಾಮಧೇನುವಿನಿಂದ

ಹುಟ್ಟಿದ ಭಟರು ಕಾರ್ತವೀರ್ಯಾನನ್ನು ಎದುರಿಸಿ, ವಿವಿಧ ಶಸ್ತ್ರಾಸ್ತ್ರಗಳಿಂದ ಅವನನ್ನು ಘಾತಿಸಿದರು. ಅವನಾದರೂ ಅವರನ್ನು ಬಾಣಗಳ ಮಳೆಯಿಂದ ವ್ಯಥೆಪಡಿಸುತ್ತಿದ್ದನು. ಇದನ್ನು ನೋಡಿ ಜಮದಗ್ನಿಯು ರೇಣುಕಾದೇವಿಗೆ ಹೇ ದೇವಿಯೆ, ಯಾವ ದೇವಿಯ ದರ್ಶನಮಾತ್ರದಿಂದಲೇ ಸರ್ವ ಇಚ್ಛಿತ ಫಲವು ಪ್ರಾಪ್ತವಾಗುವದೋ ಮತ್ತು ಯಾವಾಕೆಯು ಸರ್ವಸುರಮುನಿಗಳಿಗೆ ಆಶ್ರಯುಗಳಾಗಿದ್ದಾಳೋ ಅಂಥಾ ಕಾಮಧೇನುವು ನಮಗೋಸ್ಕರ ಅತಿ ಕಷ್ಟವನ್ನು ಹೊಂದುತ್ತಿರುವದು. ಈ ಕಾರ್ತವೀರ್ಯಾನ ಕೃತ್ಯವನ್ನು ನೋಡಿದರೆ ನನ್ನಿಂದ ಅಥವಾ ನಿನ್ನಿಂದ ವಧಿಸಲಿಕ್ಕೆ ಯೋಗ್ಯನಿದ್ದಾನೆಂಬುದು ಸಹಜವು. ಆದರೆ ಈಗ ಏನು ಮಾಡಬೇಕೆಂಬುವದು ನನಗೆ ಗೋಚರಿಸದು, ನೀನೇ ಹೇಳು.

**ರೇಣುಕಾದೇವಿ:**—ಹೇ ಪ್ರಭೂ, ಕಾರ್ತವೀರ್ಯಾನು ಮನೆಗೆ ಬಂದ ಅತಿಥಿಯು, ಪೂಜ್ಯನು ಎಂದು ತಿಳಿದು, ಕೈಲಾಸದಲ್ಲಿ ಇರುವ ಪರಶುರಾಮನನ್ನು ಕರೆಯುವದನ್ನು ಬಿಟ್ಟಿದ್ದೇನೆ.

**ಕಾಮಧೇನು:**—ಕಾರ್ತವೀರ್ಯಾನು ಮುನಿಯ ಮೇಲೆ ಬರಲು ಎಲೈ ಕಾರ್ತವೀರ್ಯಾನೇ, ಸದಾಚಾರನೂ ಶಾಂತನೂ ದಾಂತನೂ ಆದ ಜಮದಗ್ನಿಯನ್ನು ಬಿಟ್ಟು ಹೊರಟುಹೋಗು, ಅವನು ನಿರಪರಾಧಿಯು ಎಂದು ಅಡ್ಡಗಟ್ಟಿತು.

**ಕಾರ್ತವೀರ್ಯ:**—ಎಲೈ ಧೇನುವೇ, ನೀನು ಮುನಿಯನ್ನು ಬಿಟ್ಟು ಕಡೆಗೆ ಆಗು; ಇಲ್ಲದಿದ್ದರೆ ನಿನ್ನನ್ನೂ ಮುನಿಯನ್ನೂ ಇಬ್ಬರನ್ನೂ ಕಡಿದುಹಾಕುವೆನೆಂದು ಓರಿಬರಲು, ಕಾಮಧೇನುವು ಮುನಿಯ ಶರೀರವನ್ನು ತನ ಹೊಟ್ಟೆಯ ಕೆಳಗೆ ಮಾಡಿಕೊಂಡು, ಪರ್ವತಪ್ರಾಯವಾಗಿ ಬೆಳೆದು ನಿಂತು, ಕಾರ್ತವೀರ್ಯಾನನ್ನು ಕೋಡುಗಳಿಂದ ನಿವಾರಿಸಿ ಹಿಂದಕ್ಕೆ ನೂಕಿಬಿಟ್ಟಿತು.

**ಜಮದಗ್ನಿ:**—ಹೇ ದೇವಿಯೇ, ನೀನು ಸಹಸ್ರಾರ್ಜುನ ಭೂಪಾಲನಿಗೆ ಪ್ರತಿಬಂಧ ಮಾಡಬೇಡ. ಅವನು ತನ್ನ ಮನಸ್ಸಿಗೆ ಬಂದಂತೆ ಮಾಡಲಿ, ನನ್ನನ್ನು ಬಿಟ್ಟು ಕಡೆಗಾಗು.

**ಸ್ಕಂದ:**—ಮುನಿಗಳೇ, ಜಮದಗ್ನಿಯು ಹೀಗೆ ಅಂದದ್ದನ್ನು ಕೇಳಿ, ಸಕಲ ಋಷಿಗಳೂ ದೇವತೆಗಳೂ ಬಾಣತಾಗಿದ ಪ್ರಾಣಿಗಳಂತೆ ಅತ್ಯಂತ ದುಃಖಿತರಾದರು.

**ಋಷಿಗಳು:**—ಹೇ ಕಾರ್ತವೀರ್ಯ ನೃಪಶ್ರೇಷ್ಠನೇ, ನಮ್ಮೀರ ವಚನವನ್ನು ಕೇಳು. ಧೇನುವಿನ ಹಂಬಲವನ್ನು ಬಿಡು, ಅಜ್ಞನಂತೆ ನಾಶ ಹೊಂದಬೇಡ. ಘೋರ ಪಾಪವಾದ ಬ್ರಹ್ಮವಧೆಮಾಡಬೇಡ. ಬ್ರಹ್ಮಹತ್ಯಕ್ಕೆ ಸಮನಾದ ಪಾಪವು ಮತ್ತೊಂದು ಇಲ್ಲವು. ಪಂಚಮಹಾಪಾತಕದೊಳಗೆ ಗೋಹತ್ಯ, ಬ್ರಹ್ಮಹತ್ಯಗಳು ಅಧಿಕವಾಗಿರುತ್ತವೆ. ತನ್ನ ಸುಖಕ್ಕೋಸ್ಕರವಾಗಿಯೇ ಪ್ರಾಣಿಯು ಕಾರ್ಯಮಾಡಬೇಕಾಗಿರುತ್ತದೆ. ಈ ಗೋಹತ್ಯ, ಬ್ರಹ್ಮಹತ್ಯದಿಂದ ನಿನಗೆ ಯಾವ ಸುಖವಾಗಬೇಕಾಗಿದೆ? ಸರ್ವವನ್ನು ಬಲ್ಲವನಿದ್ದೀ ವಿಚಾರಿಸಿ ನೋಡು, ಇದಕ್ಕೋಸುಗ ನಿನಗೆ ದುರ್ಗತಿಯು ನಿಜವಾಗಿ ಆಗುವದು. ಈ ಜಮದಗ್ನಿ ಮತ್ತು ರೇಣುಕಾದೇವಿಯರು ಯಾರು ಎಂಬುವದು ನಿನಗೆ ಅಜ್ಞಾನದಿಂದ ತಿಳಿಯದ್ದಾಗಿದೆ. ಇವರು ಲೋಕೋದ್ಧಾರಕರು. ಕಾರಣ ನಿನ್ನ ಈ ಕೃತ್ಯವನ್ನು ಬಿಟ್ಟು ಸುಖದಿಂದ ನಿನ್ನ ಸ್ಥಾನಕ್ಕೆ ಹೋಗು.

---

# ೩೨ನೇ ಅಧ್ಯಾಯ

**ಸ್ಕಂದ:**—ಹೇ ಋಷಿಗಳೇ, ಎಲ್ಲ ಮುನಿಗಳು ಕಾರ್ತವೀರ್ಯನಿಗೆ ಹೀಗೆ ಬೋಧಿಸಿದರು. ಕಾರ್ತವೀರ್ಯನಿಗೆ ಬುದ್ಧಿ ಬಾರದೆ ರೋಷದಿಂದ ಇಂತೆಂದನು.

**ಕಾರ್ತವೀರ್ಯ:**—ಎಲೈ ಋಷಿಗಳಿರಾ, ಈ ಜಮದಗ್ನಿಯಿಂದ ಆಜ್ಞಾಪಿಸಲ್ಪಟ್ಟ ಕಾಮಧೇನುವು ರೋಷದಿಂದ ನನ್ನ ಸರ್ವಬಲವನ್ನೂ, ಪುತ್ರ ಬಾಂಧವರನ್ನೂ, ಮಂತ್ರಿಗಳನ್ನೂ ಧ್ವಂಸಮಾಡಿತು ಇವನು ಕೋಪವನ್ನು ಬಿಟ್ಟವನೂ ಶಾಂತನೂ ಎಂದು ಹೇಳುತ್ತೀರಿ. ಇವನು ಕೋಪವನ್ನು ಬಿಟ್ಟದ್ದರೆ ಕಾಮಧೇನುವಿನಿಂಡ ಇಂಥ ಹಾನಿಯನ್ನು ಮಾಡಿಸುತ್ತಿದ್ದನೇ ಇವನೇ ಸರ್ವ ಅನರ್ಥಕ್ಕೆ ಕಾರಣನಿದ್ದಾನೆ. ಇವನನ್ನು ಕೊಲ್ಲದೆ ಬಿಡೆನು.

**ಋಷಿಗಳು:**—ಹೇ ಅರಸನೇ, ನಿಜವಾಗಿ ಜಮದಗ್ನಿಯು ಕ್ರೋಧರಹಿತನು, ನಿರಪರಾಧಿಯು, ಶುಚಿಯು. ಸದಾಚಾರಯುಕ್ತನೂ ಮಹಾತ್ಮನೂ

ಇದ್ದಾನೆ. ಇವರೊಳಗೆ ಏನೂ ಸಂದೇಹವಿಲ್ಲ. ಇನ್ನು ಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡಬೇಕು. ಭೋರಾಜನೇ, ಯಾವಾಕೆಯ ಪ್ರಸಾದ ಓಂದ ಸುರರು ಸಿದ್ಧರು ಮುನಿಗಳು ಮೊದಲಾದವರು, ನಿತ್ಯದಲ್ಲಿ ಅನ್ನಪಾನಾದಿಗಳಿಂದ ಅಖಂಡ ತೃಪ್ತಿಪಡುತ್ತಾರೋ ಅಂಥಾ ಈ ಏಕವೀರಾ ದೇವಿಯು ಅತ್ಯಂತ ರೂಪಳೆಂದು ತಿಳಿ. ಈ ರೇಣುಕಾದೇವಿಯೇ ದೇವ ಮಾತೆಯಾದ ಅದಿತಿಯು, ಗೌರಿಯು. ಗೌತಮಿಯು, ಭಾಗೀರಥೀಯು. ಇವಳೇ ಧರ್ಮದೇವ ಋಷಿಗಳಿಗೆ ತೇಜೋರೂಪಳು. ಈ ದೇವಿಯೇ ಅಖಿಲ ಯೋಗಿಗಳ ಹೃದಯದಲ್ಲಿ ನಿತ್ಯವಾಸಮಾಡತಕ್ಕಂಥವಳು. ಈ ದೇವಿಯೇ ಬ್ರಹ್ಮವಿದ್ಯಾಸ್ವರೂಪಳು, ಈಕೆಯೇ ಗಾಯತ್ರಿಯು, ಈಕೆಯೇ ಸಾವಿತ್ರಿಯು. ಈ ರೇಣುಕಾದೇವಿಯ ಮುಖವೇ ಬ್ರಹ್ಮನು, ಹೃದಯವೇ ವಿಷ್ಣುವು, ಸರ್ವ ಮುನಿಗಳು ವೈಕೂದಲು, ಸಕಲ ಸಮುದ್ರ ಗಳು ಕುಕ್ಷಿಯು, ಮೇರುಪರ್ವತವು ಶಿರವು. ಭೂಮಿಯೇ ಪಾದಗಳು. ಇಂಥ ವೀಣರೂಪಳಾದ ದೇವಿಯು ಜಗದುದ್ಧಾರಕ್ಕೋಸುಗ ಅಗ್ನಿಕುಂಡ ದಿಂದ ಅಯೋನಿಜಳಾಗಿ ಜನಿಸಿದ್ದಾಳೆ. ತ್ರಿಲೋಕಪತಿಯಾದ ಸಾಕ್ಷಾತ್ ಶಿವನೇ ಕಶ್ಯಪರೂಪನಾದ ಈ ಜಮದಗ್ನಿಯು. ಸಹಸ್ರಾರ್ಜುನನೇ ಇವೆಲ್ಲ ವನ್ನು ನೀನು ಅರಿಯದೆ ಮೂರ್ಖನಂತೆ ಆಚರಿಸಬೇಡ ಧರ್ಮಮಾರ್ಗವ ಪಿಡಿಯುವನಾಗು.

---

## ೩೩ನೇ ಅಧ್ಯಾಯ

**ಸ್ಕಂದಃ**—ಹೇ ಋಷಿಗಳೇ, ಈ ಪ್ರಕಾರ ಮುನಿಗಳು ಹೇಳಿದ್ದನ್ನು ಮಹಾಬಲ ಶಾಲಿಯಾದ ಕಾರ್ತವೀರ್ಯನು ಕೇಳಿದರೂ ಶಾಂತನಾಗದೆ ಅದಕ್ಕೆ ವಿಪರೀತವಾಗಿ ಅತ್ಯಂತ ಕುಪಿತನಾದನು. ಮೂರ್ಖರಿಗೆ ಮಾಡಿದ ಉಪದೇಶವು ವಿಪರೀತವಾಗುವದೆಂಬ ನೀತಿಯಂತೆ, ಕಾಮಧೇನುವಿನ ವಾಸನೆಯಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವನಾದ್ದರಿಂದ ಪ್ರಳಯಕಾಲದ ಅಗ್ನಿಯಂತೆ ಕ್ರೋಧದಿಂದ ಖಡ್ಗವನ್ನು ಝಳಪಿಸುತ್ತ ಕಾಮಧೇನುವನ್ನು ಹೊಡೆಯಲಿಕ್ಕೆ ಆಕಾಶಕ್ಕೆ ಹಾರಿದನು. ಕಾಮಧೇನುವಾದರೂ ಕ್ರೋಧ

ದಿಂದ ಆಕಾಶಕ್ಕೆ ಹಾರಿ, ಕೋಡುಗಳಿಂದ ಅವನನ್ನು ಹನನ ಮಾಡಿತು. ಅವನಾದರೂ, ಖಡ್ಗದಿಂದ ಕಾಮಧೇನುವನ್ನು ಹನನ ಮಾಡಿದನು. ಹೀಗೆ ಕಾಮಧೇನುವು ರಾಜನನ್ನು ಹೊಡೆಯುವದು, ರಾಜನು ಕಾಮಧೇನು ವನ್ನು ಹೊಡೆಯುವದು ಕೆಲಕಾಲ ಸಮವಾಗಿ ನಡೆಯಿತು. ಆ ಮೇಲೆ ರಾಜನು ಉಳಿದ ತನ್ನ ಬಲಸಹಿತನಾಗಿ ಕಾಮಧೇನುವನ್ನು ಹಿಡಿದು ಕಟ್ಟಿ, ಎಲ್ಲರೂ ನೋಡುವಂತೆ ಹೊಡೆಯುತ್ತಾ ಎಳೆದುಕೊಂಡು ನಡೆದನು. ಆವಾಗ ಸರ್ವ ದೇವತೆಗಳೂ, ಮುನಿಗಳೂ, ಸಿದ್ಧರೂ, ಸಾಧ್ಯರೂ, ಸಹಸ್ರಾರ್ಜುನನು ಜಮದಗ್ನಿಯ ಕಾಮಧೇನುವನ್ನು ಬಲಾತ್ಕಾರದಿಂದ ಒಯ್ಯುವದನ್ನು ಕಂಡು ಅತ್ಯಂತ ದುಃಖಿತರಾದರು. ಅದೇ ಸಮಯದಲ್ಲಿ ಜಮದಗ್ನಿಯ ಕ್ರೋಧವು ಪುರುಷಾಕಾರದಿಂದ ಅವನ ಮುಂದೆ ಬಂದು ನಿಂತು, ಇಂತೆಂದನು.

**ಕ್ರೋಧ:**—ಹೇ ಮುನಿಯೇ, ನೋಡು ನೀನು ನನ್ನನ್ನು ಅವಿಚಾರದಿಂದ ತ್ಯಾಗಮಾಡಿದ ಕೃತ್ಯದ ಫಲವಿದು. ನಾನು ಇಲ್ಲದ್ದರಿಂದ ನಿನಗೆ ಇಂಥ ದೀನಾವಸ್ಥೆಯು ಪ್ರಾಪ್ತವಾಗಿದೆ. ಹೇ ಬ್ರಹ್ಮನ್ ನನ್ನ ವ್ಯತಿರಿಕ್ತ ಶಸ್ತ್ರ ಗಳೂ, ವೀರ್ಯವೂ, ಅಸ್ತ್ರಗಳೂ, ಬಲವೂ ಪುರುಷನಿಗೆ ಏನೂ ಉಪ ಯೋಗವಾಗವು. ನೀನು ನನ್ನನ್ನು ಗ್ರಹಣಮಾಡದಿದ್ದರೆ ಈ ದುಷ್ಟನಾದ ಕಾರ್ತವೀರ್ಯನಿಂದ ಅನೇಕ ಸಂಕಟಕ್ಕೊಳಗಾಗುವಿ. ಕಾರಣ ನನ್ನನ್ನು ಸ್ವಲ್ಪಕಾಲ ಗ್ರಹಣಮಾಡು, ಅಂದರೆ ಈ ಕಾರ್ತವೀರ್ಯನನ್ನು ಬಲಸಹಿತ ನಾಗಿ ಶಸ್ತ್ರಾಸ್ತ್ರಗಳಿಂದ ಕ್ಷಣದೊಳಗೆ ನಾಶಮಾಡುವಿ.

---

## ೩೪ನೇ ಅಧ್ಯಾಯ

**ಸ್ಕಂದ:**—ಹೇ ಋಷಿಗಳೇ, ಆ ಪುರುಷರೂಪವನ್ನು ಧರಿಸಿದ ಕ್ರೋಧವು ಜಮದಗ್ನಿಗೆ ಅನೇಕ ರೀತಿಯಿಂದ ಹೇಳಿಕೊಂಡರೂ ಅವನು ಏನೂ ಉತ್ತರಕೊಡದೆ ಸುಮ್ಮನಾಗುತ್ತಿರಲಿಕ್ಕೆ, ಕಾಡಿಗೆ ಬೆಟ್ಟದಂತೆ ಕಪ್ಪಿತವಾದ ಭೀಕರ ಶರೀರವುಳ್ಳ ಮತ್ತು ಅಗ್ನಿಯಂತೆ ಕೆಂಪಿತವಾದ ನೇತ್ರವುಳ್ಳ ಆ ಕ್ರೋಧನು ಅಲ್ಲಿಯೇ ಅಂತರ್ಧಾನನಾದನು. ಸಹಸ್ರಾರ್ಜುನನ ಜನ



**ಕಾರ್ತವೀರಾರ್ಜುನನು ಜಮದಗ್ನಿಯ ಕಾಮಧೇನುವನ್ನು ಬಂಧಿಸಿದ್ದು**



**ಅಗಸ್ತ್ಯಋಷಿಗಳು ಕಾರ್ತವೀರಾರ್ಜುನನಿಗೆ ಹಿತೋಪದೇಶ ಮಾಡಲು ಬರುವದು**

ರಿಂದ ಎಳೆದೊಯ್ಯುವಂಥ ಕಾಮಧೇನುವು ಅವರಿಗೆ ವಶವಾಗದೆ, ಕಟ್ಟಿದ ಬಂಧನಗಳನ್ನು ಹರಿದುಕೊಂಡು ಜಮದಗ್ನಿಯ ಕಡೆಗೆ ಅಂಬಾ ಎಂದು ಒದರುತ್ತ ಬಂದು ಆತನ ಹೆಗಲ ಮೇಲೆ ಕುತ್ತಿಗೆಯನ್ನು ಇಟ್ಟು ದುಃಖದಿಂದ ಅಳಹತ್ತಿತು. ಅಷ್ಟರಲ್ಲಿ ಪುನಃ ಆ ರಾಜದೂತರು ಓಡಿಬಂದು ಕಾಮಧೇನು ವನ್ನು ಬಲಾತ್ಕಾರದಿಂದ ಹಿಡಿದು ಕಟ್ಟಿಕೊಂಡು ಹೊಡೆಯುತ್ತಾ ಮತ್ತೆ ಎಳೆ ಕೊಂಡು ಹೋದರು. ಹೀಗೆ ಶಸ್ತ್ರಾದಿಗಳಿಂದ ಹೊಡೆಯುತ್ತಾ ಒಯ್ಯುವಾಗ ಅಧೀನಳಾದ ಕಾಮಧೇನುವು ದೊಡ್ಡ ಧ್ವನಿಯಿಂದ ಮುನಿಯನ್ನು ಸ್ಮರಿಸಿ ಪ್ರಲಾಪಿಸುತ್ತಿತ್ತು. ಅದು ಪುನಃ ಆ ಜನರಿಂದ ಬಿಡಿಸಿಕೊಂಡು ಜಮದಗ್ನಿಯ ಬಳಿಗೆ ಬಂದು ಅತ್ಯಂತ ದುಃಖಮಾಡತೊಡಗಿತು. ಆಗ ಜಮದಗ್ನಿಯು ಆ ದುಃಖಿತಳಾದ ಕಾಮಧೇನುವಿಗೆ ನಮಸ್ಕರಿಸಿ ಕರುಣದಿಂದ ಇಂತೆಂದನು.

**ಜಮದಗ್ನಿ:**—ಹೇ ಸುರವಂದ್ಯಳಾದ ಕಾಮಧೇನುವೇ, ನಾನು ಕೋಪವನು ಬಿಟ್ಟ ಕಾರಣ ಈ ದುಷ್ಟ ವೈರಿಯನ್ನು ಶಸ್ತ್ರಾಸ್ತ್ರಗಳಿಂದ ನಾಶಮಾಡಲಿಕ್ಕೆ ಅಶಕ್ತನಿದ್ದೇನೆ. ಮತ್ತು ಈ ಸಹಸ್ರಾರ್ಜುನನು ಅತಿಥಿಯಾಗಿರು ವದರಿಂದಲೂ ಇವನನ್ನು ಹನನ ಮಾಡಲಿಕ್ಕೆ ಬರುವಂತೆ ಇಲ್ಲ. ಆದ್ದರಿಂದ ನನ್ನಿಂದ ನಿನ್ನ ಸಂರಕ್ಷಣೆಯು ಅಶಕ್ಯವಾಗಿದೆ ಎಂದು ಜಮದಗ್ನಿಯು ಕಾಮಧೇನುವಿಗೆ ಹೇಳುತ್ತಿರುವಷ್ಟರಲ್ಲಿ ಸಹಸ್ರಾರ್ಜುನನು ಕ್ರೋಧದಿಂದ ಶಸ್ತ್ರಪಾಣಿಯಾಗಿ ತನ್ನ ಮಂತ್ರಿಗಳನ್ನು ಕೂಡಿಕೊಂಡು ಬಂದು ಜಮದಗ್ನಿಗೆ ಎಲೈ ಮುನಿಯೇ, ನೀನು ಈ ಧೇನುವನ್ನು ಸ್ವತಃ ನಿನ್ನ ಕೈಯಿಂದ ಕಟ್ಟಿ ನನಗೆ ಕೊಡು, ಇಲ್ಲದಿದ್ದರೆ ಈ ಖಡ್ಗದಿಂದ ನಿನ್ನನ್ನು ಕಡಿದು ಹಾಕಿ ಇದನ್ನು ತೆಗೆದುಕೊಂಡು ಹೋಗುತ್ತೇನೆ. ಜೀವದಿಂದ ಇರುವ ಇಚ್ಛೆಯಿದ್ದರೆ ಹೀಗೆ ಮಾಡು.

**ಜಮದಗ್ನಿ:**—ಹೇ ರಾಜನೇ, ಈ ಧೇನುವು ಬರದಿದ್ದರೆ ನಾನೇನು ಮಾಡಲಿ ಇದನ್ನು ಕೊಡಲಿಕ್ಕೆ ನಾನು ಶಕ್ತನಲ್ಲ. ನೀನೇ ಬಲಾತ್ಕಾರದಿಂದ ಬಂದರೆ ತೆಗೆದುಕೊಂಡು ಹೋಗು.

**ಸ್ಕಂದ:**—ಹೇ ಋಷಿಗಳೇ, ಈ ಪ್ರಕಾರ ಮುನಿಯು ಅಂದಕೂಡಲೇ ಹೈಹ ಯಾಧಿಪನು ಅತ್ಯಂತ ಕೋಪದಿಂದ ಜಮದಗ್ನಿಯನ್ನು ತಿರಸ್ಕರಿಸಿ ನಿಶಿತ ವಾದ ಖಡ್ಗದಿಂದ ಅವನನ್ನು ಹನನಮಾಡಿದನು. ಆಗ ಪಾಪರಹಿತಳಾದ ರೇಣುಕಾದೇವಿಯು ಪತಿಯನ್ನು ಕಡಿಯುವವನ್ನು ಕಂಡು ಅತೀ ದುಃಖ

ದಿಂದ ಹೇ ಅರ್ಜುನನೇ, ಕಡಿಯಬೇಡವೆಂದು ಜಗಜ್ಜನನಿಯು ಪತಿಯ ದೇಹದ ಮೇಲೆ ಬಿದ್ದಳು. ಆದರೂ ಆ ನೀಚನು ಕರುಣವಿಲ್ಲದೆ ಇಪ್ಪತ್ತೊಂದು ಸಾರೆ ರೇಣುಕಾದೇವಿ ಸಹಿತ ಜಮದಗ್ನಿಯನ್ನು ಕಡಿದನು. ರೇಣುಕಾದೇವಿಗೆ ಇಪ್ಪತ್ತೊಂದು ಘಾಯಗಳಾದವು. ಜಮದಗ್ನಿಯು ಮೃತನಾದನು. ಈ ಭೀಕರ ಕಾರ್ಯವನ್ನು ನೋಡಿ ಸಕಲ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಋಷಿಗಳೂ ಮೊದಲಾದವರು ಅಪಾರ ದುಃಖ ಸಮುದ್ರದೊಳಗೆ ಮುಳುಗಿದರು. ಪತಿವ್ರತಾಶಿರೋಮಣಿಯಾದ ರೇಣುಕಾದೇವಿಯು, ಪತಿಗೋಸುಗ ಇಪ್ಪತ್ತೊಂದು ಸಾರೆ ಖಡ್ಗದ ಘಾತವನ್ನು ಸಹಿಸಿ, ಪತಿಯು ಮೃತನಾದದ್ದನ್ನು ನೋಡಿ ಅತೀ ದುಃಖದಿಂದ ಕೈಲಾಸದಲ್ಲಿದ್ದ ಪರಶುರಾಮನಿಗೆ ಕೇಳಿಸುವಂತೆ ಉಚ್ಚ ಧ್ವನಿಯಿಂದ ಪ್ರಳಾಪಮಾಡುತ್ತ ನೀಚನಾದ ಸಹಸ್ರಾರ್ಜುನನಿಗೆ ಇಂತೆಂದಳು.

**ರೇಣುಕಾದೇವಿ:**—ಎಲೋ ಬ್ರಹ್ಮಘಾತಕನಾದ ಪಾಪಿ ಅರ್ಜುನನೇ, ಕಾಮಧೇನುವಿನ ಇಚ್ಛೆಯಿಂದ ಘೋರ ರೌರವನರಕ ಸಾಧನವಾದ ಪಾಪವನ್ನು ಹೇಸದೇ ಆಚರಿಸಿದ ನರಕಿಯೇ, ಶಾಂತನೂ ಧಾರ್ಮಿಕನೂ ಪುಣ್ಯಮೂರ್ತಿಯೂ ಆದ ಜಮದಗ್ನಿಯ ಅನ್ನವನ್ನುಂಡು, ಅವನ ಧೇನುವನ್ನು ಅನ್ಯಾಯದಿಂದ ಇಚ್ಛಿಸಿ, ಅವನನ್ನು ವಧಿಸಿದ ಘೋರ ಪಾಪಿಯೇ ನಿನಗೆ ಯಾವ ಗತಿಯಾಗುವದು.

---

# ೩೫ನೇ ಅಧ್ಯಾಯ

**ಸ್ಕಂದ:**—ಹೇ ತಪಸ್ವಿಗಳೇ, ಈ ಪ್ರಕಾರ ರೇಣುಕಾದೇವಿಯು ಅನ್ನಲು, ಕಾರ್ತವೀರ್ಯನು ಏನೂ ನುಡಿಯದೆ, ಪರಶುರಾಮನ ಭಯದಿಂದ ಹಿಂದೆ ಮುಂದೆ ನೋಡುತ್ತಾ ಪಲಾಯನಮಾಡಿದನು. ಜಮದಗ್ನಿಯು ಮೃತನಾಗಲಾಗಿ ಕಾಮಧೇನುವು ದುಃಖದಿಂದ ಪ್ರಳಾಪಿಸುತ್ತ ಸ್ವರ್ಗಕ್ಕೆ ಪ್ರಯಾಣಮಾಡಿತು. ಅತ್ತ, ಕೈಲಾಸದಲ್ಲಿದ್ದ ಪರಶುರಾಮನು ಜಗದ್ವಂದ್ಯಳೂ, ಮಹಾಸಾಧ್ವಿಯೂ, ಪತಿಭಕ್ತಿಪರಾಯಣಳೂ ಆದ ರೇಣುಕಾ ಮಾತೆಯ ದುಃಖದ ಉಚ್ಚಧ್ವನಿಯನ್ನು ಕೇಳಿ, ಪರಮಾತ್ಮನಿಗೆ ನಮಸ್ಕರಿಸಿ,



ಕಾರ್ತವೀರ್ಯಾರ್ಜುನನು ಜಮದಗ್ನಿಯನ್ನು ಕೊಲ್ಲಲಿಕ್ಕೆ ಬಂದದ್ದು
ಮತ್ತು
ಶ್ರೀ ರೇಣುಕಾದೇವಿಯು ನಡುವೆ ನಿಂತು ಅಡ್ಡಿಯನ್ನು ಮಾಡುವದು

ಆಜ್ಞೆಯನ್ನು ಪಡೆದು ಶೀಘ್ರವಾಗಿ ತಾಯಿಯ ಗೃಹಕ್ಕೆ ಬಂದನು. ಆಗ ನೋಡುವಷ್ಟರಲ್ಲಿ, ತಂದೆಯ ಶರೀರವು ತುಂಡುತುಂಡು ಆದದ್ದನ್ನೂ ತಾಯಿಗೆ ಇಪ್ಪತ್ತೊಂದು ಖಡ್ಗದ ಘಾಯಗಳಾದದ್ದನ್ನೂ ಕಂಡು ಅತ್ಯಂತ ದುಃಖದಿಂದ ತಾಯಿಗೆ ಇಂತೆಂದನು.

**ಪರಶುರಾಮ**:—ಹೇ ಜಗದ್ವಂದ್ಯಳಾದ ಜನನಿಯೇ, ಈ ಭೀಕರವಾದ ಕೃತ್ಯವು ಯಾವ ದುರಾತ್ಮನಿಂದ ಸಂಭವಿಸಿತು ? ಶೀಘ್ರವಾಗಿ ಹೇಳು. ದುಃಖ ಮಾಡಬೇಡ. ಈಗಲೇ ಆ ದುಷ್ಟನನ್ನು ಅವನ ಸೇನಾಸಹಿತವಾಗಿ ಶರ ಪರಶುಗಳಿಂದ ನಾಶಮಾಡಿ ಅವನ ಮಾಂಸಮಜ್ಜಾಮೇದಗಳನ್ನು ಭೂತ ಗಳಿಗೂ, ಹದ್ದು, ಕಾಗೆ, ನರಿನಾಯಿಗಳಿಗೂ ಬಲಿಕೊಡುತ್ತೇನೆ. ತೀವ್ರ ವಾಗಿ ಹೇಳು. ಆ ವೈರಿಯು ಯಾರು ಮತ್ತು ಎಲ್ಲಿ ಇರುವನು ?

**ಸ್ಕಂದ**:—ಮುನಿಗಳೇ, ಈ ಪ್ರಕಾರ ಪರಶುರಾಮನು ಅಂದಕೂಡಲೇ, ರೇಣುಕಾದೇವಿಯು ಆದ ವೃತ್ತಾಂತವನ್ನು ಹೇಳಿದಳು.

**ರೇಣುಕಾದೇವಿ**:—ಎಲೈ ಪುತ್ರನೆ, ಕಾರ್ತವೀರ್ಯನೆಂಬ ಅರಸನು ನಮ್ಮ ಆಶ್ರಮಕ್ಕೆ ಬಂದಿದ್ದನು. ಆತನಿಗೆ, ಅವನ ಬಲಸಹಿತವಾಗಿ, ನಾವು ಆದರ ಪೂರ್ವಕ ಆತಿಥ್ಯಸತ್ಕಾರವನ್ನು ಮಾಡಿದೆವು. ಅನಂತರ ಅವನು ಕಾಮ ಧೇನುವಿನ ಅಘಟಿತಪದಾರ್ಥಗಳನ್ನು ಕೊಡುವ ಅದ್ಭುತ ಶಕ್ತಿಯನ್ನು ಕಂಡು ವ್ಯಾಮೋಹದಿಂದ ಅದನ್ನು ತನಗೆ ಕೊಡಬೇಕೆಂದು ನಿನ್ನ ಪಿತನನ್ನು ಕೇಳಿದನು. ಅದಕ್ಕೆ ಮುನಿಯು, ರಾಜನೇ, ಅದು ದೇವಬ್ರಾಹ್ಮಣರ ಅತಿಥಿ ಗಳ ಸತ್ಕಾರಕ್ಕೋಸ್ಕರ ಇಂದ್ರನಿಂದ ಕೊಡಲ್ಪಟ್ಟಿದೆ. ಕಾರಣ ಅದನ್ನು ಬಿಟ್ಟು ಮತ್ತೇನಾದರೂ ಬೇಡು ಎಂದು ಹೇಳಿದನು. ಆದರೂ ಅವನು ಕೇಳದೆ ಬಲಾತ್ಕಾರದಿಂದ ಕಾಮಧೇನುವನ್ನು ಒಯ್ಯಲಿಕ್ಕೆ ಪ್ರಯತ್ನಮಾಡಿ ದನು. ಆದರೆ ಆ ಧೇನುವು ಅವನ ಮನೆಗೆ ಹೋಗಲಿಲ್ಲ. ಆ ಮೇಲೆ ಅದನ್ನು ಬಂಧಿಸಿ ದಂಡಾದಿಗಳಿಂದ ಹೊಡೆಯುತ್ತ, ಒಯ್ಯಲಿಕ್ಕೆ ಎಷ್ಟು ಪ್ರಯತ್ನ ಮಾಡಿದರೂ, ಅದು ಎಲ್ಲರನ್ನು ನಿವಾರಿಸಿ ಅವನ ಸ್ಥಾನಕ್ಕೆ ಹೋಗ ದಾಯಿತು. ಆಗ ರಾಜನು ಅತ್ಯಂತ ಕೋಪದಿಂದ ಬಂದು, ನಿನ್ನ ನಿರಪ ರಾಧಿಯಾದ ತಂದೆಯನ್ನು ಎಳೆದು ಖಡ್ಗದಿಂದ ಕಡಿಯುವಷ್ಟರಲ್ಲಿ ನಾನು ಅವನ ಮೇಲೆ ಬಿದ್ದೆನು. ಆದರೂ ಕೇಳದೆ ನನ್ನನ್ನು ಸಹಿತ ಕಡಿದು ಅವನನ್ನು ಕೊಂದುಬಿಟ್ಟನು. ಮಗನೇ ನೋಡು, ನನ್ನ ಮೈಯಲ್ಲಿ

ಇಪ್ಪತ್ತೊಂದು ಘಾಯಗಳಿರುತ್ತವೆ. ಪುತ್ರನೇ, ಪತಿವಿರಹಿತಳಾಗಿ ನಾನು ಜೀವದಿಂದ ಇರಲಾರೆ.

**ಪರಶುರಾಮ:**—ಹೇ ತಾಯಿಯೇ, ಆ ನೀಚ ಕ್ಷತ್ರಿಯನು ನಿನಗೆ ಇಪ್ಪತ್ತೊಂದು ಪೆಟ್ಟು ಹಾಕಿದ್ದರಿಂದ ಆ ಕ್ಷತ್ರಿಯವಂಶವನ್ನೇ ಇಪ್ಪತ್ತೊಂದು ಸಾರೆ ನಾಶಮಾಡಿ ನಿಃಕ್ಷತ್ರಿಯರ ಪೃಥ್ವಿಯನ್ನು ಮಾಡುವೆನು, ಮತ್ತು ಈಗ ಆ ಸಹಸ್ರಾರ್ಜುನನ ಸಾವಿರ ತೋಳುಗಳನ್ನು ಸರ್ವಸುರಮುನಿಗಳೆಲ್ಲರೂ ನೋಡುವಂತೆ ಛೇದಿಸಿ, ತಾಲಫಲವನ್ನು ಛೇದಿಸುವಂತೆ ಆ ನೀಚನ ತಲೆಯನ್ನು ರಣದಲ್ಲಿ ಈಗಲೇ ಪರಶುವಿನಿಂದ ಛೇದಿಸಿಬಿಡುವೆನು.

**ರೇಣುಕಾದೇವಿ:**—ಹೇ ಮಗನೇ, ಯೋಗ್ಯ ಮಾತಾಡಿದಿ, ನೀನು ಪ್ರತಿಜ್ಞೆ ಮಾಡಿದ ಪ್ರಕಾರ, ಪಿತೃಭಕ್ತಿಯಿಂದ ಪಿತನ ಸಂಸ್ಕಾರವನ್ನು ಮಾಡಿ, ನಿನ್ನ ಪ್ರತಿಜ್ಞೆಯನ್ನು ಸಫಲಮಾಡು. ಪುತ್ರನೇ, ಯಾವ ಸ್ಥಾನದಲ್ಲಿ ನಿನ ಪಿತನ ಸಂಸ್ಕಾರಮಾಡಬೇಕೆಂದು ಆಕಾಶವಾಣಿಯಾಗುವದೋ ಆ ಸ್ಥಾನದಲ್ಲಿ ಸಂಸ್ಕಾರಮಾಡಬೇಕು. ಕಾರಣ ಮಗನೇ, ಕಾವಡಿಯಲ್ಲಿ ಒಂದು ಪರಡಿಯಲ್ಲಿ ಮುನಿಯ ಶರೀರವನ್ನೂ ಮತ್ತೊಂದರಲ್ಲಿ ನನ್ನನ್ನೂ ಇಟ್ಟುಕೊಂಡು ಹೆಗಲ ಮೇಲೆ ಹೊತ್ತುಕೊಂಡು ನಡೆ. ಎಲ್ಲಿ ಆಕಾಶವಾಣಿಯಾಗುವದೋ ಅಲ್ಲಿ ಕಾವಡಿಯನ್ನು ಇಳಿಸಿ, ಸರ್ವಶಾಸ್ತ್ರವಿಶಾರದನಾದ ಸತ್ಪುರುಷನಿಂದ ಕೂಡಿಕೊಂಡು ನಮ್ಮಿಬ್ಬರ ಸಂಸ್ಕಾರವನ್ನು ಭಕ್ತಿಪೂರ್ವಕವಾಗಿ ತೀರಿಸು.

---

# ೩೬ನೇ ಅಧ್ಯಾಯ

**ಸ್ಕಂದ:**—ಹೇ ಮುನಿಗಳೇ, ಪರಶುರಾಮನು ತಾಯಿಯ ಆಜ್ಞೆಯಂತೆ ಕಾವಡಿಯಲ್ಲಿ ಒಂದು ಪರಡಿಯಲ್ಲಿ ತಂದೆಯ ಶರೀರವನ್ನೂ, ಮತ್ತೊಂದರಲ್ಲಿ ಜಗಜ್ಜನನಿಯಾದ ರೇಣುಕಾದೇವಿಯನ್ನೂ ಸ್ಥಾಪಿಸಿ, ಕಾವಡಿಯನ್ನು ಹೆಗಲ ಮೇಲೆ ಹೊತ್ತುಕೊಂಡು, ಭಕ್ತಿಪೂರ್ವಕವಾಗಿ, ತಂದೆಯ ಸಂಸ್ಕಾರದ ಸ್ಥಾನವನ್ನು ಶೋಧಿಸುವಗೋಸ್ಕರ ಕನ್ಯಾಕುಬ್ಜಾಶ್ರಮವನ್ನು ಬಿಟ್ಟು ಸಂಚರಿಸುತ್ತಾ, ವೀರಜಾತೀರ್ಥ ಮೊದಲಾದ ಉತ್ತಮ ತೀರ್ಥಗಳನ್ನೂ,



ಪರಶುರಾಮನು ಜಮದಗ್ನಿಯ ಕಳೇಬರವನ್ನು ಶ್ರೀ ರೇಣುಕಾದೇವಿಯನ್ನು
ಕವಡಿಯಲ್ಲಿ ಕೂಡ್ರಿಸಿಕೊಂಡು ದತ್ತಾತ್ರೇಯನ ಆಶ್ರಮವಾದ
ಉಗರಗೊಳ್ಳದ ಏಳುಕೊಳ್ಳದ ಪರ್ವತಕ್ಕೆ ಬಂದದ್ದು.

ಅನೇಕ ಪರ್ವತಗಳನ್ನೂ, ದ್ವೀಪಗಳನ್ನೂ, ಪಟ್ಟಣಗಳನ್ನೂ ದಾಟುತ್ತ, ಶೀಘ್ರದಿಂದ ಅಲಕೀ ಎಂಬ ಗ್ರಾಮದಲ್ಲಿದ್ದ ಶುಭವಾದ ದತ್ತಾತ್ರೇಯ ಆಶ್ರಮಕ್ಕೆ ಬಂದನು. ಅಲ್ಲಿಂದ ಮುಂದೆ ಭಕ್ತಿ ಪರಾಯಣನಾದ ರಾಮನು ಸಕಲ ಸುರಮುನಿ, ಸಿದ್ಧ, ಗಂಧರ್ವಾದಿಗಳನ್ನು ಕೂಡಿಕೊಂಡು ಸಹ್ಯಾದ್ರಿಗೆ ಬರುವಷ್ಟರಲ್ಲಿ ಪರಶುರಾಮನಿಗೆ ಆಕಾಶವಾಣಿಯು ಭೋ ಭೋ ಪರಶುರಾಮನೇ, ನಿನ್ನ ತಂದೆಯ ಸಂಸ್ಕಾರವನ್ನು ಇದೇ ಸ್ಥಾನದಲ್ಲಿ ದತ್ತಾತ್ರೇಯನನ್ನು ಕೂಡಿಕೊಂಡು ಆದರದಿಂದ ಮಾಡು ಎಂದು ಉಚ್ಚರಿಸಿತು. ಆಗ ಆ ಆಕಾಶವಾಣಿಯನ್ನು ಕೇಳಿ, ಪರಶುರಾಮನು ಅಲ್ಲಿಯೇ ಕಾವಡಿಯನ್ನು ಇಳುಹಿ ಸುತ್ತಲೂ ನೋಡಿದನು. ಆಗ ಅವನಿಗೆ ಮುನಿಗಳಿಂದ ಆವೃತವಾದ ಮತ್ತು ಫಲಮೂಲಾದಿಗಳಿಂದ ಶೋಭಿತವಾದ ಒಂದು ಆಶ್ರಮವು ಕಣ್ಣಿಗೆ ಬಿತ್ತು. ಅಲ್ಲಿಗೆ ಹೋಗಿ ನೋಡಲು ದತ್ತಾತ್ರೇಯನು ದಿಗಂಬರನಾಗಿ ಕುಳಿತಿದ್ದನು. ಕೈಯೊಳಗೆ ಮದಿರಾಪಾತ್ರೆಯನ್ನು ಹಿಡಿದಿದ್ದನು. ಸಮೀಪದಲ್ಲಿ ದಿಗಂಬರಳಾದ ಒಬ್ಬ ಸ್ತ್ರೀಯು ಇದ್ದಳು. ಆಗ ಪರಶುರಾಮನು ಭಕ್ತಿಪೂರ್ವಕವಾಗಿ ದತ್ತಾತ್ರೇಯನಿಗೆ ನಮಸ್ಕರಿಸಿ, ಇಂತೆಂದು ಪ್ರಾರ್ಥಿಸಿದನು.

**ಪರಶುರಾಮ:**—ಹೇ ಸ್ವಾಮಿಯೇ, ನನ್ನ ಮೇಲೆ ಕೃಪೆಮಾಡಬೇಕು. ನಾನು ತಂದೆಯ ಶರೀರವನ್ನು ಸಂಸ್ಕರಿಸಲಿಕ್ಕೆ ಬಂದಿದ್ದೇನೆ. ದಯಮಾಡಿ ಸಂಸ್ಕಾರವಿಧಿಯನ್ನು ಹೇಳಬೇಕು.

**ದತ್ತಾತ್ರೇಯ:**—ಹೇ ಬ್ರಾಹ್ಮಣನೇ, ಧರ್ಮ ಅಧರ್ಮವೆಂಬುವದು ನನಗೆ ಗೊತ್ತಿಲ್ಲ. ನಾನು ಅತಿ ದುಃಖಿತವಾದ ಯಥೇಷ್ಟ ಧರ್ಮವನ್ನಾಶ್ರಯಿಸಿದ್ದೇನೆ.

**ರಾಮ:**—ಹೇ ಮುನಿಸತ್ತಮನೇ, ನೀನೇ ಸಕಲ ಧರ್ಮಾಧರ್ಮಗಳನ್ನು ಬಲ್ಲವನು. ನೀನೇ ಸಕಲ ದೇವತೆಗಳಿಗೂ, ಯೋಗಿಗಳಿಗೂ ಪರಮಗುರು. ಹೇ ಯೋಗೀಶ್ವರನೇ, ನೀನೊಬ್ಬನೇ ಲೋಕೋದ್ಧಾರಕನೆಂದು ನಾನು ನಿಜವಾಗಿ ತಿಳಿದಿದ್ದೇನೆ.

**ದತ್ತಾತ್ರೇಯ:**—ಹೇ ಬ್ರಾಹ್ಮಣನೇ, ಈ ದಿಗಂಬರಳಾದ ಸ್ತ್ರೀಯು ನನ್ನವಳು. ನಾನೂ ದಿಗಂಬರನು. ಅಲ್ಲದೆ ಮದಿರಾಪಾನಾಸಕ್ತನು, ಅಸ್ಪೃಶ್ಯನು, ದುರ್ವೃತ್ತನು, ವಿಧಿವತ್ ಸಂಸ್ಕಾರ ಮಾಡುವದನ್ನು ನಾನು ಅರಿಯೆನು.

**ಸ್ಕಂದ**:—ತಪಸ್ವಿಗಳೇ ಈ ಪ್ರಕಾರ ನುಡಿದು ದತ್ತಾತ್ರೇಯನು ಆಸನದಿಂದ ಎದ್ದು ಕೈಮುಗಿದು, ರೇಣುಕಾದೇವಿಯನ್ನು ಭಕ್ತಿಯಿಂದ ಸ್ತವನಮಾಡಿದನು.

**ದತ್ತಾತ್ರೇಯ**:—ಹೇ ದೇವಿಯೇ, ನೀನೇ ಜಗಜ್ಜನನಿಯು. ಸುರೇಶ್ವರಿಯೇ ಸರ್ವರಿಂದಲೂ, ನೀನು ವಂದ್ಯಳು. ನೀನು ಅವಾಂಗ್ಮಾನ ಸಗೋಚರಳು. ಹೇ ತಾಯಿಯೇ ಭವಸಾಗರದಿಂದ ಪ್ರಾಣಿಗಳನ್ನು ದಾಟಿಸಲಿಕ್ಕೆ ನೀನು ನೌಕಾಸ್ವರೂಪಳು. ಚರಾಚರರೂಪವಾದ ತ್ರಿಜಗದಲ್ಲಿ ನೀನೇ ಏಕ ವೀರಳು. ಸಕಲದರಲ್ಲಿ ನೀನೇ ಪೂರ್ಣವಾಗಿರುವವಳು. ನಿನ್ನನ್ನು ಬಿಟ್ಟು ಅನ್ಯ ಕಿಂಚಿತ್ತಾದರೂ ಇಲ್ಲ. ಹೇ ಮಹಾಮಾಯಿಯೇ, ನಿನಗೆ ನಾನು ನಮಸ್ಕಾರ ಮಾಡುತ್ತೇನೆ.

**ಸ್ಕಂದ**:—ಮುನಿಗಳೇ, ಹೀಗೆ ದೇವಿಯನ್ನು ಸ್ತುತಿಸಿ, ಮೃತನಾದ ಜಮದಗ್ನಿ ಮುನಿಯ ಪದಕಮಲಗಳಿಗೆ ಶಿರಸಾಷ್ಟಾಂಗ ನಮಸ್ಕರಿಸಿ, ದತ್ತಾತ್ರೇಯನು ಪರಶುರಾಮನಿಗೆ ಇಂತೆಂದನು.

**ದತ್ತಾತ್ರೇಯ**:—ಹೇ ಪರಶುರಾಮನೇ, ಈಗ ನೀನು ಶೀಘ್ರದಿಂದ ಸಕಲ ತೀರ್ಥಗಳಲ್ಲಿ ಸ್ನಾನಮಾಡಿಕೊಂಡು ಬಂದು, ವಿಧಿಯುಕ್ತ ಪ್ರಕಾರ ಸಂಸ್ಕಾರ ಕರ್ಮವನ್ನು ಮಾಡು.

---

## ೩೭ನೇ ಅಧ್ಯಾಯ

**ಸ್ಕಂದ**:—ಹೇ ಋಷಿಗಳೇ, ದತ್ತಾತ್ರೇಯನ ವಚನಪ್ರಕಾರ ಸರ್ವತೀರ್ಥಗಳಲ್ಲಿ ಸ್ನಾನಮಾಡಿ ಬರಬೇಕಾದರೆ ತಡವಾಗುವದೆಂದು ತಿಳಿದು ಪರಶುರಾಮನು ಬಾಣ ಪ್ರಯೋಗ ಮಾಡಿ ಸಹ್ಯಾಚಲ ಪರ್ವತವನ್ನು ಭೇದಿಸಿ, ಭಕ್ತಿ ಮುಕ್ತಿಗಳನ್ನು ಕೊಡತಕ್ಕ ಸಕಲತೀರ್ಥಗಳನ್ನು ಕ್ಷಣದೊಳಗೆ ತರಿಸಿದನು. ಅಲ್ಲಿ ಗೋದಾವರಿ, ಗಂಗಾ, ಯಮುನಾ, ಸರಸ್ವತಿ, ಭಾಗೀರಥಿ, ತುಂಗಭದ್ರಾ, ನರ್ಮದಾ, ಪ್ರಯಾಗ, ಪುಷ್ಕರ, ಗಯಾ ಮೊದಲಾದ ಅನೇಕ ತೀರ್ಥ ಪ್ರವೇಶಮಾಡಿದವು. ಆ ಸ್ವಾಮಿತೀರ್ಥದಲ್ಲಿ ಪರಶುರಾಮನು ಸ್ನಾನಮಾಡಿ, ತಂದೆಯ ಸಂಸ್ಕಾರಮಾಡಿದನು. ಆಗ ಜಗನ್ಮಾತೆಯಾದ ರೇಣುಕಾದೇವಿಯು ಸರ್ವಾಭರಣಭೂಷಿತಳಾಗಿ, ದತ್ತಾತ್ರೇಯ, ಪರಶುರಾಮನನ್ನು ಕರೆದು ಇಂತೆಂದನು.

**ರೇಣುಕಾದೇವಿ:**—ಹೇ ಸುರೇಶ್ವರ, ನಾನು ಈಗ ಪತಿಯ ಸಂಗಡ ಸ್ವಸ್ಥಾನಕ್ಕೆ ಹೋಗಲಿಕ್ಕೆ ಇಚ್ಛಿಸುತ್ತೇನೆ. ನೀನು ಗುರು, ದೇವ ದ್ವಿಜರನ್ನು ಸೇವಿಸಿ ನಿನ್ನ ಪ್ರತಿಜ್ಞೆಯನ್ನು ಪೂರ್ಣಮಾಡು.

**ಸ್ಕಂದ:**—ಮುನಿಗಳೇ, ಹೀಗೆ ಜನನಿಯ ನುಡಿಯನ್ನು ಕೇಳಿ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನು ದುಃಖದಿಂದ ಹೀಗೆ ಅಂದನು.

**ಪರಶುರಾಮ:**—ಹೇ ತಾಯಿಯೇ, ನೀನು ದೇಹತ್ಯಾಗ ಮಾಡಿದರೆ ನನ್ನ ಸಾಹಸವನ್ನು ನೋಡುವವರಾರು? ಮಾತೆ ನಿನ್ನ ವ್ಯತಿರಿಕ್ತ ನನಗೆ ಯಾವ ವಸ್ತುವಿದ್ದರೂ ಸುಖ ಕೊಡದು. ನಾನು ಅತಿ ದುಃಖಿಯಾಗುವೆನು.

**ರೇಣುಕಾದೇವಿ:**—ಹೇ ಮಗನೇ, ನೀನು ಏನೂ ಚಿಂತೆ ಮಾಡಬೇಡ. ಸರ್ವತೀರ್ಥಗಳಿಂದಲೂ, ದೇವತೆಗಳಿಂದಲೂ, ಮುನಿಗಳಿಂದಲೂ, ಸಿದ್ಧಕಿನ್ನರರಿಂದಲೂ, ಸಹವಾಗಿ ನಾನು ಇಲ್ಲೇ ವಾಸಮಾಡುವೆನು; ನಿಶ್ಚಯವು ಎಂದು ಪರಶುರಾಮನಿಗೆ ಅಭಯಕೊಟ್ಟು ಮಹಾ ಪತಿವ್ರತಾ ಶಿರೋಮಣಿಯಾದ ರೇಣುಕಾದೇವಿಯು, ದೇವತೆಗಳೂ, ಮುನಿಗಳೂ, ಮೊದಲಾದವರು ನೋಡುತ್ತಿರಲು ಅಗ್ನಿಯನ್ನು ಪ್ರವೇಶಮಾಡಿದಳು. ಆ ಸಮಯದಲ್ಲಿ ರೇಣುಕಾದೇವಿಯ ಮಸ್ತಕದ ಮೇಲೆ ಪುಷ್ಪವೃಷ್ಟಿಯು ಸುರಿಯಿತು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಅಪ್ಸರ ಗಣರು ಸುಗಂಧಚಂದನಗಳಿಂದ ಸೇಚನಮಾಡಿದರು. ಸರ್ವದೇವತೆ ಗಳೂ, ಮುನಿಗಳೂ, ಪರಮಾನಂದಭರಿತರಾದರು. ಗಂಧರ್ವರು ವೀಣಾವೇಣು, ಮೃದಂಗ ಮೊದಲಾದ ವಾದ್ಯಗಳಿಂದ ಸಹವಾಗಿ ಮನೋಹರ ಗಾಯನಮಾಡಿದರು. ಪರಶುರಾಮನು, ದತ್ತಾತ್ರೇಯ ನಿಂದ ಕೂಡಿಕೊಂಡು, ತಂದೆತಾಯಿಗಳ ಸಂಸ್ಕಾರ ಮಾಡಿದನಂತರ ಪುನಃ ಅವರನ್ನು ಆಹ್ವಾನ ಮಾಡಿದನು. ಆಗ ಜಗನ್ಮಾತೆಯಾದ ರೇಣುಕಾ ದೇವಿಯು, ಸಕಲ ದೇವತೆಗಳನ್ನೂ, ಋಷಿಗಳನ್ನೂ ಕೂಡಿಕೊಂಡು ಜಮದಗ್ನಿ ಸಹವಾಗಿ ತೀವ್ರವಾಗಿ ಉದಯವಾದಳು. ಮತ್ತು ರಾಮನು ಗಣೇಶ್ವರನಾಗಿ, ಕೈಯಲ್ಲಿ ಪರಶು ಹಿಡಕೊಂಡು ಒಂದು ರೂಪದಿಂದ ರೇಣುಕಾದೇವಿಯ ಸಮೀಪದಲ್ಲಿ ನಿಂತಿದ್ದನು. ಸಹ್ಯಾಚಲಸ್ಥಿತಳಾದ ದೇವಿಯನ್ನು ರಾಮನು ಪ್ರತ್ಯಕ್ಷ ಕಂಡು, ಕಾರ್ತವೀರ್ಯನ ವಧಾರ್ಥ ಬಾಂಧವರನ್ನು ಕೂಡಿಕೊಂಡು, ತಾಯಿತಂದೆಗಳಿಂದ ಅನುಜ್ಞೆಯನ್ನು ಪಡೆ

ಯುವಂಥವನಾದನು. ಆ ನಾಹನ ಕಾಲದಲ್ಲಿ ರೇಣುಕೆಯೊಡನೆ ಉದ್ಭವ ರಾದ ಸುರಸಿದ್ಧಗಂಧರ್ವ ಮೊದಲಾದವರು ಲಿಂಗರೂಪವಾದ ಆ ರೇಣುಕಾ ದೇವಿಯ ಶರೀರದಲ್ಲಿ ಲೀನವಾದರು. ಮತ್ತು ನಾಕಾರರೂಪದಿಂದ ಬಂದ ಮೇರುಪರ್ವತ, ಹಿಮವತ್ಪರ್ವತ, ಶ್ರೀಶೈಲಪರ್ವತ ಮೊದಲಾದ ಸರ್ವಪರ್ವತಗಳೂ, ಸರ್ವತೀರ್ಥಗಳೂ ದೇವಿಯನ್ನು ಸೇವಿಸುವದ ಕ್ಕೋಸ್ಕರ ರೇಣುಕಾದೇವಿಯ ಶರೀರದಲ್ಲಿ ಅಡಗಿದವು.

---

## ೩೮ನೇ ಅಧ್ಯಾಯ

**ಸ್ಕಂದ:**—ಋಷಿಗಳೇ ಈ ಪ್ರಕಾರ ಪರಶುರಾಮನು ತಂದೆತಾಯಿಗಳ ಸಂಸ್ಕಾರ ಅವಾಹನಗಳನ್ನು ವಿಧಿಪೂರ್ವಕ ಮಾಡಿ, ಪುನರುತ್ಪತ್ತಿಯಾದ ಜನನಿಜನಕರಿಗೆ ಪರಮಾನಂದದಿಂದ ನಮಸ್ಕರಿಸಿ, ಪೂಜೆ ಮಾಡಿ, ದೇವಬ್ರಾಹ್ಮಣರನ್ನು, ದತ್ತಾತ್ರೇಯನನ್ನೂ ಭಕ್ತಿಯಿಂದ ಪೂಜಿಸಿ ಷಡ್ರಸಭೋಜನದಿಂದ ತೃಪ್ತಿಪಡಿಸಿ ವಸ್ತ್ರಾಭರಣ, ರತ್ನ, ಧನಕನಕಾದಿ ಗಳನ್ನೂ, ಗಜಾಶ್ವರಥಾದಿಗಳನ್ನೂ, ಗೋಹಿಷ್ಯಾದಿಗಳನ್ನೂ ಬ್ರಾಹ್ಮಣರಿಗೆ ಕೊಟ್ಟು ಸಂತೋಷಪಡಿಸಿದನು. ಹೀಗೆ ರಾಮನು ಭಕ್ತಿಯಿಂದ ದ್ವಿಜ ರನ್ನೂ, ಬ್ರಹ್ಮೇಂದ್ರ ಮೊದಲಾದ ದೇವತೆಗಳನ್ನೂ ಪೂಜಿಸಿ, ಪಿತೃಗಳಿಗೆ ತರ್ಪಣಕೊಟ್ಟು ರೇಣುಕಾದೇವಿಗೆ ಇಂತೆಂದನು.

**ಪರಶುರಾಮ:**—ಹೇ ವಿಚಿತ್ರಚರಿತಳಾದ ತಾಯಿಯೇ, ಈಗ ನಾನು ಆ ದುಷ್ಟನಾದ ಸಹಸ್ರಾರ್ಜುನನನ್ನು ಅವನ ಬಲಸಹಿತ ನಾಶಮಾಡಲಿಕ್ಕೆ ಮಾಹಿಷ್ಮತಿ ನಗರಕ್ಕೆ ಹೋಗುತ್ತೇನೆ. ನನಗೆ ಅಪ್ಪಣೆಯನ್ನು ದಯ ಪಾಲಿಸು. ಆ ಋಷಿಘಾತಕನಾದ ಅರ್ಜುನನನ್ನು ಸರ್ವದೇವತೆಗಳು ನೋಡುವಂತೆ ರಣದಲ್ಲಿ ಸಂಹರಿಸುವೆನು.

**ರೇಣುಕಾದೇವಿ:**—ಹೇ ಮಗನೇ, ನೀನು ಪರಾತ್ಪರನು. ಜ್ಞಾನಗಮ್ಯ ನೆಂದು ನಾನು ತಿಳಿದಿದ್ದೇನೆ. ಪುತ್ರನೇ, ಆ ದುಷ್ಟನಾದ ಕಾರ್ತವೀರ್ಯ ನನ್ನು ಕೊಂದು, ಶೀಘ್ರ ಬರುವಂಥವನಾಗು. ನೀನು ಧನ್ಯನು. ಕೃತ ಕೃತ್ಯನು.

**ಸ್ಕಂದ**:—ಋಷಿಗಳೇ, ಪರಶುರಾಮನು ಸಹಸ್ರಾರ್ಜುನನ ವಧಾರ್ಥವಾಗಿ ಹೋಗಲಿಕ್ಕೆ ರೇಣುಕಾದೇವಿಯ ಅಪ್ಪಣೆಯಂ ಪಡೆದು, ಭಕ್ತಿಯಿಂದ ನಮಸ್ಕಾರಮಾಡಿ, ಪರಶುವನ್ನು ತೆಗೆದುಕೊಂಡು ಶೀಘ್ರವಾಗಿ ಆಕಾಶಕ್ಕೆ ಹಾರಿದನು. ಅಲ್ಲಿಂದ ಶತ್ರುಸಂಹಾರಕನಾದ ರಾಮನು ಅತ್ಯಂತ ಕ್ರೋಧದಿಂದ ಮಾಹಿಷ್ಮತಿ ನಗರಕ್ಕೆ ಬಂದನು.

**ಸ್ಕಂದ**:—ಮುನಿಗಳೇ, ಪರಶುರಾಮನು ಮಾಹಿಷ್ಮತಿ ನಗರಕ್ಕೆ ಬರುವಾಗ ನಾರದ ಮುನಿಯು ಅಂಬರಮಾರ್ಗದಿಂದ ಭೂಲೋಕಕ್ಕೆ ಬರುತ್ತಿದ್ದನು. ಇಬ್ಬರಿಗೂ ಮಾರ್ಗದಲ್ಲಿ ಭೆಟ್ಟಿಯಾಯಿತು. ಆಗ ಭಗವಾನ್ ನಾರದ ಋಷಿಯು ಪರಶುರಾಮನನ್ನು ಬಾಹುಗಳಿಂದ ಆಲಿಂಗಿಸಿ, ನಮಸ್ಕಾರಮಾಡಿ ಹೀಗೆ ಅನ್ನುವಂಥವನಾದನು.

**ನಾರದ**:– ಹೇ ರಾಮನೇ, ಪುಣ್ಯಮೂರ್ತಿಯೇ, ನನ್ನ ವಚನವನ್ನು ಪಾಲಿಸು. ಈ ಪುಣ್ಯಕರವಾದ ಸುರಸಿದ್ಧಋಷಿ ಮೊದಲಾದವರಿಂದ ಸೇವಿತವಾದ ನರ್ಮದಾ ನದಿಯನ್ನು ಭೂತಗಳು ಆವರಿಸಿಕೊಂಡು, ಸ್ನಾನಾರ್ಥವಾಗಿ ಬಂದಂಥವರಿಗೆ ಅತ್ಯಂತ ಕಷ್ಟ ಕೊಡುತ್ತಿರುವವು. ಕಾರಣ, ಅವುಗಳನ್ನು ನಾಶಮಾಡಿ ನೀನು ಮುಂದಿನ ಕಾರ್ಯವನ್ನು ಮಾಡಬೇಕು.

**ಪರಶುರಾಮ**:—ಹೇ, ಮುನಿಯೇ, ಈ ನದಿಯನ್ನು ದೂಷಿತಮಾಡಿರುವ ಭೂತಗಳು ಇರುವ ಸ್ಥಾನವು ನಿನಗೆ ಗೊತ್ತಿದ್ದರೆ ಶೀಘ್ರವಾಗಿ ತೋರಿಸು. ಈಗಲೇ ನಾಶಮಾಡುತ್ತೇನೆ.

**ಸ್ಕಂದ**:—ಮುನಿಗಳೇ,ನಾರದನು ಈ ಪ್ರಕಾರ ಪರಶುರಾಮನ ವಚನವನ್ನು ಕೇಳಿ ಆ ಭೂತಗಳು ಇರತಕ್ಕ ಸ್ಥಾನವನ್ನು ತೋರಿಸಲಿಕ್ಕೆ ಪರಶುರಾಮನನ್ನು ಕರಕೊಂಡು ನಡೆದನು. ಆ ಸ್ಥಾನವು ಅತ್ಯಂತ ಭೀಕರವಾಗಿ ತೋರುತ್ತಿತ್ತು. ಅಲ್ಲಿ ಕ್ರೂರವಾದ ಅನೇಕ ಪಕ್ಷಿಗಳೂ, ಮಾಂಸಾಹಾರಿಗಳಾದ ಹುಲಿ, ಸಿಂಹ, ಕರಡಿ ಮೊದಲಾದ ಕಾಡುಮೃಗಗಳೂ, ತುಂಬಿದ್ದವು. ಇಂಥ ಘೋರ ಕಾಂತಾರದಲ್ಲಿ, ಆ ಭೂತಗಳು ಆಲದ ಮರದಲ್ಲಿ ವಾಸವಾಗಿದ್ದದ್ದನ್ನು ನಾರದಮುನಿಯು ರಾಮನಿಗೆ ತೋರಿಸಿದನು.

**ಪರಶುರಾಮ**:—ಹೇ ಮುನಿಯೇ, ಈ ಘೋರ ಕಾಂತಾರದಲ್ಲಿ ವಾಸವಾಗಿರುವ ಭೂತಗಳನ್ನು ಕ್ಷಣದೊಳಗೆ ನಾಶಮಾಡುತ್ತೇನೆ. ನನ್ನ ಭುಜ

ಬಲವನ್ನು ನೋಡು ಎಂದು ನುಡಿಯುವಷ್ಟರಲ್ಲಿ ಭೂತಗಳು ಭೀಕರಾ ಕಾರವನ್ನು ಧರಿಸಿ, ಪರಶುರಾಮನ ಮೇಲೆ ಅವನನ್ನು ಹರಿದು ತಿನ್ನುವುದಕ್ಕೆ ಅರ್ಭಟಿಸುತ್ತಾ ಓಡಿ ಬಂದವು. ಆಗ ಪರಶುರಾಮನು ಕ್ರೋಧದಿಂದ ಕೊಡಲಿಯಿಂದ ಎಲ್ಲ ಭೂತಗಳನ್ನು ಕಡಿದುಹಾಕಿದನು. ಆಗ ದೇವತೆಗಳು ಪರಮಾನಂದದಿಂದ ಪರಶುರಾಮನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ದೇವದುಂದುಭಿಗಳು ಮೊಳಗಿದವು.

**ನಾರದ**:—ಹೇ ರಾಮನೇ, ನೀನು ತ್ರಿಭುವನೇಶ್ವರನು. ನಿನ್ನ ಸಮಾನ ಬಲವಂತರು ಮೂರು ಲೋಕದಲ್ಲಿ ಯಾರೂ ಇಲ್ಲ—ಎಂದು ಸ್ತುತಿಸಿ ಪರಶುರಾಮನನ್ನು ಭಕ್ತಿಯಿಂದ ಪೂಜಿಸಿದನು.

**ಸ್ಕಂದ**:—ಋಷಿಗಳೇ, ನಾರದ ಮುನಿಯು ಈ ಪ್ರಕಾರ ಪರಶುರಾಮನನ್ನು ಪೂಜಿಸಿ, ಮೇಲಿಂದ ಮೇಲೆ ಆಲಿಂಗಿಸಿ, ಇಬ್ಬರೂ ಕೂಡಿ ನರ್ಮದಾನದಿಗೆ ಬಂದು ಸ್ನಾನಮಾಡಿ ತಟದ ಮೇಲೆ ಬರುತ್ತಿರಲಿಕ್ಕೆ ಒಂದು ರಮ್ಯವಾದ ಆಶ್ರಮವು ಅವರಿಗೆ ದೃಷ್ಟಿಗೋಚರವಾಯಿತು.ಅಲ್ಲಿಗೆ ಹೋಗಿ ನೋಡಲು ಮಾರ್ಕಂಡೇಯನು ಶಿವಧ್ಯಾನದಲ್ಲಿ ಕುಳಿತಿದ್ದನು. ನಾರದ ಮುನಿಯೂ ಪರಶುರಾಮನೂ ಮಾರ್ಕಂಡೇಯನಿಗೆ ನಮಸ್ಕಾರ ಮಾಡಿದರು. ಆಗ ಮಾರ್ಕಂಡೇಯನು ಅತ್ಯಂತ ಆನಂದದಿಂದ ಅವರನ್ನು ಭಕ್ತಿಪೂರ್ವಕವಾಗಿ ಪೂಜಿಸಿ, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ವಿನಯದಿಂದ ಇಂತೆಂದನು.

**ಮಾರ್ಕಂಡೇಯ**:—ಹೇ ಮುನಿಶ್ರೇಷ್ಠ ಪರಶುರಾಮನೇ, ನೀನು ಭಗವಾನ್ ನಾರದ ಮುನಿಯನ್ನು ಕೂಡಿಕೊಂಡು ನನ್ನ ಆಶ್ರಮಕ್ಕೆ ಆಗಮಿಸಿ ದರ್ಶನಕೊಟ್ಟದ್ದರಿಂದ ನಾನು ಧನ್ಯನಾದೆನು, ಕೃತಕೃತ್ಯನಾದೆನು. ಹೇ ಹೃಷೀಕೇಶನೇ, ನಿನ್ನನ್ನೇ ಧ್ಯಾನಿಸುತ್ತ ನಾವೆಲ್ಲರೂ ಈ ಗಂಗಾತಟದಲ್ಲಿ ವಾಸಿಸುತ್ತಿದ್ದೇವೆ.ಸ್ವಾಮಿನ್ ಈ ನನ್ನ ಆಶ್ರಮವು ಬಲವಂತನಾದ ಕಾರ್ತವೀರ್ಯನಿಂದ ಭಗ್ನವಾಯಿತು. ಮತ್ತು ಈಗ ಒಬ್ಬ ಮಹಾಮಾಯಾವಿಯಾದ ಬಲಿಷ್ಠರಾಕ್ಷಸನು ಅತ್ಯಂತ ಕ್ರೂರನೂ,ಮುನಿಮಾಂಸಭಕ್ಷಕನೂ ವಿಕರಾಳರೂಪನೂ ಇದ್ದು, ಯಾವಾಗಲೂ ತ್ರಿಶೂಲಧಾರಿಯಾಗಿ ಆಕಾಶ ಮಾರ್ಗದಲ್ಲಿ ಸಂಚರಿಸುತ್ತಾ, ಸರ್ವಸುರನರರನ್ನೆಲ್ಲ ಪೀಡಿಸುತ್ತಿದ್ದಾನೆ. ಕಾರಣ ದೀನರಕ್ಷಕನಾದ ಪ್ರಭೋ, ಈ ದುಷ್ಟರಾಕ್ಷಸನನ್ನು ನಾಶಮಾಡಿ

ನಮ್ಮನ್ನು ರಕ್ಷಿಸಬೇಕು—ಎಂದು ಮಾರ್ಕಂಡೇಯನು ವಿನಯದಿಂದ ಬೇಡಿಕೊಳ್ಳಲು, ಪರಶುರಾಮನು ಅದೇ ಕ್ಷಣವೇ ಆಕಾಶಕ್ಕೆ ಹಾರಿ ಘನ ಘರ್ಜನೆ ಮಾಡಿದನು. ಅದನ್ನು ಕೇಳಿ, ಆ ಕ್ರೂರ ರಾಕ್ಷಸನು ತ್ರಿಶೂಲ ವನ್ನು ತಿರುಗಿಸುತ್ತ ಅಬ್ಬರದಿಂದ ಪರಶುರಾಮನ ಮೇಲೆ ಬರಲು, ಪರಶು ರಾಮನು ಆ ಭೀಕರನಾದ ರಾಕ್ಷಸನ ಹೃದಯಭೇದನವಾಗುವಂತೆ ತೀಕ್ಷ್ಣ ವಾದ ಬಾಣವನ್ನು ಪ್ರಯೋಗಿಸಿದನು. ಆಗ ಆ ಬಾಣವು ರಾಕ್ಷಸನ ಉರಸ್ಥಲವನ್ನು ಭೇದಿಸಲಾಗಿ ಅವನ ಶರೀರವು ಚಕ್ರದಂತೆ ತಿರುಗುತ್ತಾ ಆಕಾಶಮಾರ್ಗದಲ್ಲಿ ಮಾಹಿಷ್ಮತಿ ನಗರದ ಮೇಲೆ ಹೋಯಿತು. ಆ ವೇಳೆ ಯಲ್ಲಿ ಹೈಹಯಾಧಿಪನು ಆಕಾಶದಲ್ಲಿ ತಿರುಗುತ್ತಿದ್ದ ಪರ್ವತಪ್ರಾಯವಾದ ರಕ್ಕಸನ ಶರೀರವನ್ನು ಕಂಡು, ಆಶ್ಚರ್ಯಭರಿತನಾಗಿ, ಇದೇನು ಅದ್ಭುತ ವೆಂದುತನ್ನ ಮಂತ್ರಿಗಳನ್ನು ಕೇಳಲು,ಅವರು ತಮಗೂ ಗೊತ್ತಾಗದೆಂದು ಹೇಳಿದರು. ಅಷ್ಟರಲ್ಲಿ ಆ ಶರೀರವು ನೋಡುನೋಡುವಷ್ಟರಲ್ಲಿಯೇ ಆ ಪಟ್ಟಣದ ಮುಂಭಾಗದಲ್ಲಿ ವಜ್ರ ಬಡೆದ ಪರ್ವತದಂತೆ ಬಂದು ಬಿದ್ದಿತು. ಆಗ ಮಾಹಿಷ್ಮತಿ ಪಟ್ಟಣವು ಗಢಗಢನೆ ನಡುಗಿತು. ಎಷ್ಟೋ ಭವ್ಯವಾದ ಭುವನಗಳು ನೆಲಸಮವಾದವು. ಇಂಥ ಅತ್ಯದ್ಭುತ ಅನಿಷ್ಟ ವನ್ನು ಕಾರ್ತವೀರ್ಯನು ಕಂಡು ಅಪರಿಮಿತ ಚಿಂತೆಗೊಳಗಾದನು

---

## ೩೯ನೇ ಅಧ್ಯಾಯ

**ಸ್ಕಂದ:**— ಹೇ ಋಷಿಗಳೇ, ಪರಶುರಾಮನ ಈ ಮಹಾ ಅದ್ಭುತ ಕೌತುಕ ವನ್ನು ನೋಡಿ ಸುರಗಂಧರ್ವಾದಿಗಳು ಪರಮಾನಂದದಿಂದ ಪರಶು ರಾಮನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ನಾರದ ಮುನಿಯು ಅತಿ ಹರುಷದಿಂದ ಪರಶುರಾಮನನ್ನು ಆಲಿಂಗಿಸಿ, ನಮಸ್ಕರಿಸಿ, ಕೈಮುಗಿದು, ಮುಂದೆ ನಿಂತು ಇಂತೆಂದನು.

**ನಾರದ:**—ಹೇ ರಾಮನೇ, ಮುಂದಿನ ಕಾರ್ಯಕ್ಕೋಸುಗ ಈಗ ನಾನು ಆ ದುಷ್ಟನಾದ ಸಹಸ್ರಾರ್ಜುನನ ಪಟ್ಟಣಕ್ಕೆ ಹೋಗಿ ನಡೆದ ವೃತ್ತಾಂತ ವನ್ನು ತಿಳಿದು ಶೀಘ್ರವಾಗಿ ಬರುವೆನು-ಎಂದು ರಾಮನಿಗೆ ನಮಸ್ಕರಿಸಿ

ಹೊರಟುಹೋದನು. ಪರಶುರಾಮನು ಪಾಪಹಾರಕವಾದ ನರ್ಮದೆ ಯಲ್ಲಿ ಸ್ನಾನಪೂಜ್ಯಾದಿಗಳನ್ನು ಮಾಡುವಂಥವನಾದನು. ಅತ್ತ ಸಹಸ್ರಾ ರ್ಜುನನು ಅತ್ಯಂತ ಅನಿಷ್ಟ ಚಿನ್ಹವಾದದ್ದನ್ನು ಕಂಡು, ಸರ್ವಮಂತ್ರಿ ಮಾಂಡಲೀಕರನ್ನು ಶೀಘ್ರದಿಂದ ಬರಮಾಡಿಕೊಂಡು ಅವರಿಗೆ ಹೀಗೆ ಅಂದನು.

**ಸಹಸ್ರಾರ್ಜುನ:**—ಎಲೈ ನೃಪರೇ; ನೀವೆಲ್ಲರು ನಿಮ್ಮ ನಿಮ್ಮ ಬಲಿಷ್ಠವಾದ ಚತುರಂಗ ಬಲದೊಡನೆ ಶೀಘ್ರಸಿದ್ಧರಾಗಿ ಬರಬೇಕು. ಪುರದ ಮಹಾ ದ್ವಾರಗಳು ಒಳಗೆ ಅನ್ಯರು ಬರದಂತೆ ಚೆನ್ನಾಗಿ ಬಂಧಿಸಲ್ಪಡಬೇಕು. ಹೊರಗೂ, ಒಳಗೂ, ಚಾರರು ಎಚ್ಚರದಿಂದ ತಿರುಗುತ್ತಿರಬೇಕು. ಹೀಗೆಂದು ಮಹಾರಾಜನು ಆಜ್ಞಾಪಿಸಲು, ಸಕಲ ಮಾಂಡಲೀಕರಾಜರು ತಮ್ಮ ತಮ್ಮ ಬಲದೊಡನೆ ಬಂದು ಕಾರ್ತವೀರ್ಯನ ಸನ್ನಿಧಿಯಲ್ಲಿ ನಿಂತರು. ಸಹಸ್ರಾರ್ಜುನನಾದರೂ ಆಯುಧಪಾಣಿಯಾಗಿ ಸಾವಧಾನ ದಿಂದ ಇರುತ್ತಿರಲಾಗಿ,ಒಂದು ಸ್ವಪ್ನವನ್ನು ಕಂಡು ಹೆದರಿ, ವಿದ್ವಾಂಸ ರಾದ ಬ್ರಾಹ್ಮಣರನ್ನು ಕರೆತರಿಸಿ, ಅವರ ಮುಂದೆ ತಾನು ಕಂಡ ಸ್ವಪ್ನ ವನ್ನು ಹೇಳಲಾರಂಭಿಸಿದನು. ಹೇ ಬ್ರಾಹ್ಮಣಶ್ರೇಷ್ಠರೇ, ಇಂದು ರಾತ್ರಿ ಯಲ್ಲಿ ನನ್ನ ಸ್ವಪ್ನದಲ್ಲಿ ನನ್ನ ತಲೆಯೂ, ತೋಳುಗಳೂ, ಕಡಿದು ಹೋದಂತೆಯೂ ಮತ್ತು ರುಂಡವು ದಿಗಂಬರವಿದ್ದಂತೆಯೂ ಕಂಡೆನು. ಇದಲ್ಲದೆ ನನ್ನ ತಾಯಿಯಾದ ರಾಕಾವತಿಯು ದಿಗಂಬರಳಾಗಿ ಕುತ್ತಿಗೆ ಯಲ್ಲಿ ಪಾಸದಿಂದ ಬದ್ಧಿತಳಾಗಿ, ಅಳುತ್ತಾ, ದಕ್ಷಿಣದಿಕ್ಕಿಗೆ .ಹೋದಂತೆ ಆದದ್ದನ್ನೂ ಮತ್ತು ಮಾಹಿಷ್ಮತಿ ನಗರವು ಗಜವಾಹನರಥಾದಿಗಳ ಸಹ ವಾಗಿ ಸಮುದ್ರದಲ್ಲಿ ಮುಳುಗಿಹೋದಂತೆಯೂ ಕಂಡೆನು. ಇದು ಅಲ್ಲದೆ ಕುಳಿತಾಗ, ಮಲಗಿದಾಗ, ಊಟಮಾಡುವಾಗ, ನಡೆದಾಡುವಾಗ, ಯಾವಾಗಲೂ ನಾನು ಕೊಂದಬ್ರಾಹ್ಮಣನೇ ನನಗೆ ಎದುರಿಟ್ಟು ತೋರು ತ್ತಾನೆ. ಹಾಲು, ನೀರು, ತುಪ್ಪ, ಅನ್ನ ಮೊದಲಾದುವುಗಳಲ್ಲಿ ಶಿರರಹಿತ ನಾಗಿ ಅನೇಕ ಘಾಯದಿಂದ ಕೂಡಿದ,ಸತಿಸಹಿತನಾಗಿ ಆ ಬ್ರಾಹ್ಮಣನು ನಿತ್ಯದಲ್ಲಿ ಸ್ವಪ್ನದಲ್ಲಿ ತೋರುತ್ತಾನೆ.

**ಬ್ರಾಹ್ಮಣರು:**—ಹೇ ರಾಜನೇ, ನೀನು ನಮಗೆ ಅಭಯವಚನ ಕೊಟ್ಟರೆ, ಈ ಸ್ವಪ್ನದ ಅರ್ಥವನ್ನು ನಾವು ಹೇಳುತ್ತೇವೆ.

**ಸಹಸ್ರಾರ್ಜುನ:**—ಹೇ ಬ್ರಾಹ್ಮಣರೇ, ನಾನು ಶಪಥಪೂರ್ವಕವಾಗಿ ಹೇಳುತ್ತೇನೆ. ಏನೊಂದೂ ಭಯಪಡದೆ ನಿರ್ಭೀತಿಯಿಂದ ಸ್ವಪ್ನದ ಅರ್ಥವನ್ನು ಹೇಳಬೇಕು.

**ಬ್ರಾಹ್ಮಣರು:**—ಎಲೈ ಅರಸೇ, ಮಹಾಪುಣ್ಯಾತ್ಮನಾಗಿಯೂ ನಿರಪರಾಧಿಯಾಗಿಯೂ ಇದ್ದ ಜಮದಗ್ನಿಯನ್ನೂ ಅವನ ಪತ್ನಿಯಾದ ರೇಣುಕಾದೇವಿಯನ್ನೂ ಘಾತಿಸಿದ ಕೃತ್ಯದ ಫಲವಿದು. ಬ್ರಹ್ಮಹತ್ಯಕ್ಕೆ ಸಮಾನವಾದ ಪಾಪವು ಮತ್ತೊಂದು ಇಲ್ಲವು. ಆದ್ದರಿಂದ ಆ ಜಮದಗ್ನಿ ಮಹರ್ಷಿಯನ್ನು ವಧಿಸಿದ ಘೋರಪಾಪವು ಈಗಲೇ ಅದರ ಫಲವನ್ನು ಕೊಡಲಿಕ್ಕೆ ಪರಿಪಾಕವಾಗಿರುತ್ತದೆ. ಇದೇ ನಿನ್ನ ಸ್ವಪ್ನದ ಅರ್ಥವು. ಭೂಪಾಲಕನೇ ಆ ಜಮದಗ್ನಿಯ ಪುತ್ರನು ಮೂರು ಲೋಕದಲ್ಲಿ ಪ್ರಸಿದ್ಧನಾಗಿರುವನು. ಅವನ ಹೆಸರು ಪರಶುರಾಮನು, ಅವನು ಶೀಘ್ರವಾಗಿ ಇಲ್ಲಿಗೆ ಬರುವನು, ಕಾರಣ ಅರಸೇ ನಿನ್ನ ರಕ್ಷಣೆಯ ವ್ಯವಸ್ಥೆ ನೀನು ತೀವ್ರಮಾಡಿಕೊಳ್ಳಬೇಕು. ಇದರೊಳಗೆ ಏನೂ ಸಂದೇಹವಿಲ್ಲವೆಂದು ಬ್ರಾಹ್ಮಣರು ಹೇಳಲು ಬಲಶಾಲಿಯಾದ ಸಹಸ್ರಾರ್ಜುನನು ಆಗಲೇ ಚಾರರನ್ನು ದಿಕ್ಕು ದಿಕ್ಕುಗಳಿಗೆ ವರ್ತಮಾನ ತಿಳಿದುಬರಲಿಕ್ಕೆ ಕಳುಹಿಸಿ ಮೂರು ಕೋಟಿ ಮದಗಜಗಳನ್ನೂ ಐದು ಕೋಟಿ ತುರಗಗಳನ್ನೂ ಆರು ಕೋಟಿ ರಥಗಳನ್ನೂ ಹತ್ತು ಕೋಟಿ ಕಾಲಾಳುಗಳನ್ನೂ ಪಟ್ಟಣದ ರಕ್ಷಣಕ್ಕೆ ಇಟ್ಟನು.

**ಚಾರರು:**—ಹೇ ಪ್ರಭೋ, ಹೈಹಯಾಧಿಪನೇ ನಾವು ಮೂರುಲೋಕದಲ್ಲಿಯೂ ಶೋಧಿಸಿ ಬಂದೆವು. ನಿನ್ನಮೇಲೆ ಬರತಕ್ಕ ಸಾಮರ್ಥ್ಯವುಳ್ಳ ವೈರಿಯು ಒಬ್ಬನೂ ಕಾಣಲಿಲ್ಲ. ಈ ಮೂರು ಲೋಕವನ್ನು ಶತೃಗಳ ತಲೆಯಮೇಲೆ ಪಾದವನ್ನಿಟ್ಟು ನಿನ್ನ ಬಾಹುಬಲದಿಂದ ನೀನೇ ಆಳತಕ್ಕವನು. ಚರಾಚರರೂಪ ಜಗತ್ತಿನಲ್ಲಿ ನಿನ್ನ ಸಮಾನ ಪರಾಕ್ರಮಿಗಳು ಯಾರೂ ಇಲ್ಲ.

**ಸಹಸ್ರಾರ್ಜುನ:**—ಸಾಕ್ಷಾತ್ ಶೂಲಪಾಣಿಯೇ ಆಗಲಿ, ದತ್ತಾತ್ರೇಯನೇ ಆಗಲಿ, ಅಥವಾ ದೇವದೈತ್ಯರಾರೇ ಆಗಲಿ, ರಣರಂಗದಲ್ಲಿ ನನ್ನೆದುರು ನಿಂತು ಕಾದುವ ಶಕ್ತಿಯು ಯಾರಿಗೂ ಇಲ್ಲ ಎಂದು ಕಾರ್ತವೀರ್ಯನು ಗರ್ವದಿಂದ ಮಾತಾಡುತ್ತಿರುವಾಗ ಅನೇಕ ಅನಿಷ್ಟ ಚಿನ್ಹಗಳು ತೋರಲಾರಂಭಿಸಿದವು. ರಕ್ತದ ಮಳೆಯು ಸುರಿಯಿತು. ಆಕಾಶ ಮಾರ್ಗದಲ್ಲಿ

ತುಂಡು ತುಂಡಾದಂಥ ಶರೀರಗಳು, ಶಿರಗಳು, ದುಃಖದಿಂದ ಚೀರುತ್ತ ಚಕ್ರವೇಗದಿಂದ ತಿರುಗುತ್ತಿದ್ದವು. ಪುರದಲ್ಲೆಲ್ಲ ಹುಲಿ, ತೋಳ, ನರಿ, ಕಾಗೆ, ಹದ್ದು, ಗೂಗೆ, ಹಾವು ಮೊದಲಾದವುಗಳೆಲ್ಲ ಅಶುಭ ಧ್ವನಿಯನ್ನು ಮಾಡುತ್ತ ಚಲಿಸುತ್ತಿದ್ದವು. ಇಂಥ ಅನಿಷ್ಟ ಚಿನ್ಹಗಳನ್ನು ಕಾರ್ತವೀರ್ಯನು ನೋಡಿ ಕಾಲಾಗ್ನಿಯಂತೆ ಕೋಪಿಷ್ಟನಾಗಿ, ಸಹಸ್ರ ಬಾಹುಗಳಲ್ಲಿ ದಿವ್ಯಾಯುಧಗಳನ್ನು ಧರಿಸಿ, ಮುಂದೆ ಬರುವ ಆಪತ್ತಿನ ನಿವಾರಣಾರ್ಥವಾಗಿ ಸಿದ್ಧನಾದನು. ಇತ್ತ ನಾರದಮುನಿಯು ಗುಪ್ತವಾಗಿ ಮಾಹಿಷ್ಮತಿ ನಗರವನ್ನು ಪ್ರವೇಶಿಸಿ ನಡೆದ ವೃತ್ತಾಂತವನ್ನೆಲ್ಲ ತಿಳಿದುಕೊಂಡು ಬಂದು ಪರಶುರಾಮನಿಗೆ ಇಂತೆಂದನು.

**ನಾರದ:**—ಹೇ ಸ್ವಾಮಿನ್, ತ್ರಿಲೋಕ ರಕ್ಷಕನೇ, ದುಷ್ಟನಾದ ಸಹಸ್ರಾರ್ಜುನನನ್ನು ಸಂಹರಿಸುವ ಸಮಯವು ಪ್ರಾಪ್ತವಾಗಿದೆ. ನೀನು ಪುರ ಬಹಿರ್ಭಾಗವಲ್ಲಿ ನಿಂತು, ಧನುಷ್ಟಂಕಾರವನ್ನು ಮಾಡಬೇಕು.

**ಸ್ಕಂದ:**—ಋಷಿಗಳೇ, ಈ ಪ್ರಕಾರ ನಾರದಮುನಿಯು ಹೇಳಲಾಗಿ ಪರಶುರಾಮನು, ನರ್ಮದಾ ಸ್ನಾನಮಾಡಿ ಗುರುದೇವ ಬ್ರಾಹ್ಮಣರನ್ನು ಭಕ್ತಿಪೂರ್ವಕವಾಗಿ ಸೇವಿಸಿ, ಹೈಹಯಾಧಿಪನ ಪುರ ಬಹಿರ್ಭಾಗವನ್ನು ಪ್ರವೇಶಿಸಿ ಧನುಷ್ಟಂಕಾರವನ್ನು ಮಾಡಿದನು. ಆ ಧನುಷ್ಟಂಕಾರದ ಶಬ್ದವು ಸಿಂಹಾಸನದ ಮೇಲೆ ಕುಳಿತಂಥಾ ಹೈಹಯಾಧಿಪನಿಗೆ ಕೋಟಿ ಸಿಡಿಲಿನಬ್ಬರದಂತೆ ಕೇಳಿಸಿತು. ಪರಶುರಾಮನು ಪುನಃ ಪುನಃ ಧನುಷ್ಟಂಕಾರವನ್ನು ಮಾಡಲು ಸಹಸ್ರಾರ್ಜುನನು ಭೀತಿಯಿಂದ ಸಿಂಹಾಸನದಿಂದೆದ್ದು ಖಡ್ಗಧಾರಿಯಾಗಿ ತನ್ನ ಮಂತ್ರಿಮಾಂಡಲಿಕರನ್ನು ಕರೆಯಿಸಿ, ಎಲೈ ಮಂತ್ರಿಮಾಂಡಲಿಕರಿರಾ, ಈ ಭೀಕರವಾದ ಧನುಸ್ಸಿನ ಶಬ್ದವನ್ನು ಕೇಳಿರಿ, ಇದು ಅತ್ಯಂತ ಆಶ್ಚರ್ಯಕಾರಕವಾಗಿದೆ ಎನ್ನಲು ಅವರೆಲ್ಲರು ಆ ಶಬ್ದವನ್ನು ಕೇಳಿ ಪ್ರಭುವೇ, ಈ ಧನುಸ್ಸಿನ ಶಬ್ದದಿಂದ ಪೃಥ್ವಿಯು ಕಂಪಾಯಮಾನವಾಗುತ್ತದೆ. ಇದರಿಂದಲೇ ಇದು ಸಾಮಾನ್ಯ ಧನುಸ್ಸಿನ ಶಬ್ದವಲ್ಲ, ಇದು ಸಾಕ್ಷಾತ್ ಶೂಲಪಾಣಿಯ ಅಥವಾ ವಿಷ್ಣುವಿನ ಧನುಸ್ಸಿನ ಶಬ್ದವಿರಬಹುದು, ಇದರಲ್ಲಿ ಏನೂ ಸಂದೇಹವಿಲ್ಲ.

**ಸ್ಕಂದ:**—ಮುನಿಗಳೇ, ಈ ಪ್ರಕಾರ ಮಂತ್ರಿಮಾಂಡಲಿಕರೆಲ್ಲರು ಹೇಳಲು ಹೈಹಯಾಧಿಪನು ಅವರೆಲ್ಲರನ್ನು ಕೂಡಿಕೊಂಡು, ಆ ಶಬ್ದವು ಎಲ್ಲಿಂದ

ಬರುವದೋ ನೋಡಬೇಕೆಂದು, ಗಗನೋನ್ನತವಾದ ತನ್ನ ಮೇಲುಪ್ಪರಿಗೆಯ ಮೇಲೆಹತ್ತಿ ಸುತ್ತಲು ನೋಡಲು ಜಮದಗ್ನಿಯ ಸುತನಾದ ಪರಶುರಾಮನು ಧನುರ್ಧಾರಿಯಾಗಿ ಪಟ್ಟಣದ ಬಹಿರ್ಭಾಗದಲ್ಲಿ ನಿಂತಿರುವದನ್ನು ನೋಡಿ ಆಶ್ಚರ್ಯಪಟ್ಟನು. ಆಗ ಪರಶುರಾಮನು ಉಪ್ಪರಿಗೆಯ ಮೇಲೆ ಇದ್ದ ಹೈಹಯಾಧಿಪನನ್ನು ನೋಡಿ ಕೈಸನ್ನೆಯಿಂದ ಯುದ್ಧಕ್ಕೆ ಬರಲಿಕ್ಕೆ ಕರೆದು ಇಂತೆಂದನು.

**ಪರಶುರಾಮ:**— ಎಲೈ ಬ್ರಹ್ಮಘಾತಕನಾದ ಪಾಪಿ ಅರ್ಜುನನೇ, ಬ್ರಾಹ್ಮಣನಾದ ನನ್ನ ಪರಾಕ್ರಮವನ್ನು ನೋಡು. ನಿರಪರಾಧಿಯಾದ ಮಹಾತ್ಮನಾದ, ಬ್ರಾಹ್ಮಣನನ್ನು ಯಾವ ಕರಗಳಿಂದ ನಾಶಮಾಡಿದಿಯೋ ಆ ನಿನ್ನ ಕರಗಳೆಲ್ಲ ರಣಭೂಮಿಯಲ್ಲಿ ಕಡಿದು ಹದ್ದು ಕಾಗೆಗಳಿಗೆ ಅನ್ನ ವಿಕ್ಕುವೆನು. ಈ ನನ್ನ ಪರಶುವಿನಿಂದ ನಿನ್ನ ತಲೆಯನ್ನು ಕಡಿದು ಹಾಕಿ, ನಿನ್ನ ದೇಹದ ಮಾಂಸವನ್ನೂ ರಕ್ತವನ್ನೂ ಶಾಕಿನಿಢಾಕಿನಿ ನರಿನಾಯಿಗಳು ಸೇವಿಸುವಂತೆ ಮಾಡುವೆನು. ನಾನು ಜಮದಗ್ನಿಯ ಪುತ್ರನು. ಬ್ರಹ್ಮಘಾತಕನಾದ ನಿನ್ನನ್ನು ಸರ್ವಋಷಿಗಳೂ ದೇವತೆಗಳೂ ನೋಡುವಂತೆ ನಿನ್ನನ್ನು ರಣದಲ್ಲಿ ಸಂಹರಿಸುವೆನು. ಹೇ ಪಾಪಿಯೇ, ನನ್ನ ದೃಷ್ಟಿಯೆಂಬ ಬಾಣಕ್ಕೆ ಸಿಕ್ಕ ನೀನು ಇನ್ನು ಯಾರ ಆಶ್ರಯದಿಂದಲೂ ಪಾರಾಗಲಾರಿ. ನೀಚನೇ, ಶೀಘ್ರ ಯುದ್ಧಕ್ಕೆ ಬರುವಂಥವನಾಗು.

---

## ೪೦ನೇ ಅಧ್ಯಾಯ

**ಸ್ಕಂದ:**— ಹೇ ಋಷಿಗಳೇ, ಈ ಪ್ರಕಾರ ಮೇಘಗರ್ಜನೆಯಂತೆ ಗರ್ಜಿಸಿ ನುಡಿದ ಪರಶುರಾಮನ ವಾಕ್ಯಗಳನ್ನು ಕೇಳಿ ಬಲವಂತನಾದ ಸಹಸ್ರಾರ್ಜುನನು ಕೋಪವಿಶಿಷ್ಟನಾಗಿ, ಇವನು ಹುಡುಗನು ಅಶಕ್ತನು ಎಂದು ತಿಳಿದು ಪರಶುರಾಮನಿಗೆ ಈ ಪ್ರಕಾರ ನುಡಿದನು.

**ಕಾರ್ತವೀರ್ಯ:**— ಹೇ ಬ್ರಾಹ್ಮಣ ಭಟುವೇ ವ್ಯರ್ಥವಾಗಿ ಗರ್ಜಿಸಬೇಡ. ನಿನ್ನ ಯೋಗ್ಯತೆಯೇನು? ನಿನ್ನ ಪರಾಕ್ರಮವನ್ನು ಕಾರ್ಯದಿಂದ ತೋರಿಸು. ಬರೇ ಬಾಯಿಂದ ಬಡಬಡಿಸಬೇಡ. ನನ್ನ ಕೂಡ ಯುದ್ಧ ಮಾಡಲಿಕ್ಕೆ

ಸಾಕ್ಷಾತ್ ಶಿವನಾದರೂ ಸಮರ್ಥನಾಗಲಾರನು, ಮತ್ತು ಸಕಲ ದೇವತೆಗಳನ್ನು ಕೂಡಿಕೊಂಡು ಬ್ರಹ್ಮವಿಷ್ಣಾದಿಗಳು ಸಹ ನನ್ನೊಡನೆ ಕಾದಲಾರರು. ನಿನ್ನಂಥ ಬಡಬ್ರಾಹ್ಮಣ ವಟುವಿನ ಪಾಡೇನು; ಎಲೇ ಹುಡುಗನೇ ಒಂದೇ ಮುಷ್ಟಿಯ ಹೊಡೆತದಿಂದ ನಿನ್ನನ್ನು ಭೂಮಿಯಲ್ಲಿ ಪಾತವಾಗುವಂತೆ ಮಾಡುವೆನು. ಸುರರು, ಅಸುರರು, ಗರುಡರು, ಗಂಧರ್ವರು, ದಾನವರು, ಮಾನವರೆಲ್ಲರು ಸಂಗರದೊಳಗೆ ನನಗೆ ಸೋತು ಹೋಗಿದ್ದಾರೆ. ನನ್ನಕೂಡ ಯುದ್ಧಮಾಡುವದು ನಿನ್ನ ಶಕ್ತಿಯಲ್ಲ ಕಾರಣ ನಿನ್ನನ್ನು ನಾನು ಕೊಲ್ಲುವದಿಲ್ಲ. ಜೀವದಿಂದ ಉಳಿಯುವ ಆಶೆಯಿದ್ದರೆ ಹೊರಟು ಹೋಗು, ಜೀವದಾನ ಕೊಡುತ್ತೇನೆ.

**ಸ್ಕಂದ:**—ಋಷಿಗಳೇ ಹೀಗೆ ಸಹಸ್ರಾರ್ಜುನನು ತನ್ನ ಪೌರುಷವನ್ನು ಮಾತಿನಲ್ಲಿಯೇ ತೋರಿಸಲು, ಮಹಾ ಪರಾಕ್ರಮಿಯಾದ ಪರಶುರಾಮನು ಕೋಪದಿಂದ ಬಾಣವೃಷ್ಟಿಗರೆದು ಸಕಲ ದಿಕ್ಕುಗಳು ಅಂಧಃಕಾರವಾಗುವಂತೆ ಮಾಡಿ ಮಾಹಿಷ್ಮತಿ ನಗರದ ಮೇಲೆ ಆಗ್ನೇಯಾಸ್ತ್ರ ಪ್ರಯೋಗ ಮಾಡಿದನು. ಆಗ ಪಟ್ಟಣವೆಲ್ಲ ಭೀಕರವಾದ ಅಗ್ನಿಜ್ವಾಲೆಯಿಂದ ವ್ಯಾಪಿಸಲ್ಪಟ್ಟಿತು. ಪುರಜನರೆಲ್ಲರೂ ಅಗ್ನಿಜ್ವಾಲೆಯನ್ನು ತಾಳಲಾರದೆ ಹಾಹಾಕಾರವನ್ನು ಮಾಡುತ್ತ ದಿಕ್ಕುದಿಕ್ಕಿಗೆ ಓಡಲಿಕ್ಕೆ ಹತ್ತಿದರು. ಇದನ್ನು ನೋಡಿ ಸಹಸ್ರಾರ್ಜುನನು ಕೋಪದಿಂದ ತನ್ನ ಸಕಲ ಬಲಸಮೇತ ಪರಶುರಾಮನನ್ನು ಮುತ್ತಿ, ದಿವ್ಯವಾದ ಕೂರ್ಗಣೆಗಳ ಮಳೆಯನ್ನೇ ಅವನ ಮೇಲೆ ಸುರಿಸಿದನು. ಪರಶುರಾಮನು ಸಹಸ್ರಾರ್ಜುನನ ಬಾಣಗಳನ್ನು ಮಧ್ಯದಲ್ಲಿಯೇ ಕಡಿದು ಪ್ರತಿಯಾಗಿ ದಿವ್ಯಾಸ್ತ್ರ ಪ್ರಯೋಗ ಮಾಡಿ ಅವನ ಆನೆ, ಕುದುರೆ, ರಥ, ಪದಾತಿಗಳನ್ನು ಧ್ವಂಸಮಾಡಿದನು. ಆಗ ರಣರಂಗವು ಅತ್ಯಂತ ಭೀಕರವಾಗಿ ತೋರಿತು. ಮಜ್ಜಾಮಾಂಸದಿಂದ ಭೂಮಿಯೆಲ್ಲ ಕೆಸರಾಯಿತು. ರಕ್ತದ ದೊಡ್ಡ ದೊಡ್ಡ ನದಿಗಳು ಭೋರೆಂದು ಶಬ್ದಮಾಡುತ್ತ ಹರಿದವು. ಈ ಪ್ರಕಾರ ತನ್ನ ಸೇನೆಯು ನಾಶವಾದದ್ದನ್ನು ಕಂಡು ಹೈಹಯಾಧಿಪನು ಕಡುಗೋಪದಿಂದ ಪರಶುರಾಮನ ಮೇಲೆ ಸರ್ವಶಕ್ತಿಯನ್ನು ಪ್ರಯೋಗಿಸಿ ಯುದ್ಧಮಾಡಿದನು. ಆದರೂ ಪರಶುರಾಮನು ಅವನಬಾಣಗಳೆಲ್ಲವನ್ನು ಲೀಲೆಯಿಂದ ನಿವಾರಿಸಿ ಮನಸ್ಸಿನಲ್ಲಿ ಮಹೇಶ್ವರನನ್ನು ಧ್ಯಾನಿಸಿ, ಅನೇಕ ವಿಘ್ನೇಶರನ್ನು ಆಯುಧ



ಶ್ರೀ ಗಜಾನನ ಮಾಯಾಸೇನೆಯಿಂದ ಕೂಡಿ ಪರಶುರಾಮನು ಕಾರ್ತವೀರಾರ್ಜುನನ ಕೂಡ ಯುದ್ಧ ಮಾಡುವದು

ಸಹಿತ ಉತ್ಪತ್ತಿಮಾಡಿ, ಅವರಿಂದ ಹೈಹಯಾಧಿಪನ ಚತುರಂಗಸೇನೆ ಯನ್ನು ನಾಶಮಾಡಿದನು. ಸಹಸ್ರಾರ್ಜುನನಾದರೂ ಮಂತ್ರಬಲದಿಂದ ಅನೇಕ ರೂಪವನ್ನು ತಾಳಿ, ಪರಶುರಾಮ ಗಣೇಶ್ವರರನ್ನು ಅನೇಕ ಕರ ಗಳಿಂದ ಅನೇಕ ಆಯುಧಗಳಿಂದ ಹೊಡೆಯುತ್ತಿದ್ದನು. ಹೀಗೆ ಸ್ವಲ್ಪ ಕಾಲ ಯುದ್ಧವಾದ ಮೇಲೆ ಪರಶುರಾಮನು ವರಹ, ನಾರಸಿಂಹ, ಗಣೇಶ, ವಿಷ್ಣು ಮೊದಲಾದ ರೂಪಗಳಿಂದ ಸಹಸ್ರಾರ್ಜುನನ ಬಲವನ್ನೆಲ್ಲ ವ್ಯಾಪಿಸಿ ಗಜಗಳೊಳಗೆಲ್ಲ ರಾಮನು, ಅಶ್ವಗಳೊಳಗೆಲ್ಲ ರಾಮನು ರಥಗಳೊಳಗೆಲ್ಲ ರಾಮನು, ಪದಾತಿಗಳೊಳಗೆಲ್ಲ ರಾಮ ನು ಹೀಗೆ ಸರ್ವ ರಣರಂಗವನ್ನು ರಾಮಮಯಮಾಡಿ ಸಹಸ್ರಾರ್ಜುನ ನೊಬ್ಬನನ್ನು ಬಿಟ್ಟು ಎಲ್ಲ ಸೇನೆಯನ್ನು ನಾಶಮಾಡಿ, ಕಡೆಗೆ ತನ್ನ ಕೊಡ್ಲಿಯಿಂದ ಸಹಸ್ರಾರ್ಜುನನ ಸಹಸ್ರ ತೋಳುಗಳನ್ನು ಕತ್ತರಿಸಿ, ಶಿರವನ್ನು ಕತ್ತರಿಸಿದನು. ಆಗ ದೇವತೆಗಳು ಪರಮಾನಂದದಿಂದ ಪುಷ್ಪ ವೃಷ್ಟಿಯನ್ನು ಮಾಡಿದರು. ದೇವಧುಂದುಭಿಗಳು ಮೊಳಗಿದವು. ನಾರದ ಮುನಿಯು ಪರಮಾನಂದಪಟ್ಟನು. ಗಂಧರ್ವರು ಗಾನ ನೃತ್ಯಾದಿಗಳನ್ನು ಮಾಡಿದರು. ಮೂರು ಲೋಕದ ಪ್ರಾಣಿಗಳೆಲ್ಲರಿಗೂ ಅತ್ಯಾನಂದವಾ ಯಿತು. ಸುರಮುನಿಗಳೆಲ್ಲರೂ ಪರಶುರಾಮನನ್ನು ಪರಮಾನಂದದಿಂದ ಕೊಂಡಾಡಿದರು. ಆ ಮೇಲೆ ಪರಶುರಾಮನು ನಾರದಮುನಿಯನ್ನು ಕೂಡಿಕೊಂಡು ಆಶ್ರಮಕ್ಕೆ ಬಂದು, ಜಗದ್ವಂದ್ಯಳಾದ ರೇಣುಕಾದೇವಿಗೂ ಪರಮಪೂಜ್ಯನಾದ ಜಮದಗ್ನಿಗೂ ಆನಂದದಿಂದ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿ, ಸಹಸ್ರಾರ್ಜುನನ ಸಂಹಾರದ ವೃತ್ತಾಂತವನ್ನು ಹೇಳಲು ಜಮದಗ್ನಿ ರೇಣುಕೆಯರು ಅತ್ಯಂತ ಆನಂದಪಟ್ಟು, ಮಗನ ಭಕ್ತಿಯನ್ನೂ ಶೂರತನವನ್ನೂ ಕೊಂಡಾಡಿದರು. ಮತ್ತು ಪೂರ್ವಸ್ಥಾನ ವನ್ನು ಬಿಟ್ಟು ಇಲ್ಲಿಯೇ ವಾಸಮಾಡಿದರು. ಈ ಕಾಲವಲ್ಲಿ ಮೂರು ಲೋಕದ ಜನರು ಸರ್ವದೇವತೆಗಳ ತೇಜೋಮಯಳಾದ ರೇಣುಕಾ ದೇವಿಯ ದರ್ಶನಸೇವಾದಿಗಳಿಗೋಸ್ಕರವಾಗಿ ಮತ್ತು ಪರಶುರಾಮನು ಸಕಲ ತೀರ್ಥಗಳನ್ನು ಇಲ್ಲಿಯೇ ತರಿಸಿದ್ದರಿಂದ ಈ ಮಾತೃತೀರ್ಥ(ಯಣಿ ಗೊಂಡ) ದಲ್ಲಿ ಸ್ನಾನಮಾಡಿ ಕೃತಾರ್ಥರಾಗುವದಗೋಸ್ಕರವಾಗಿಯೂ ಬರಹತ್ತಿದರು. ಸತ್ಯಲೋಕದಿಂದ ವೇದಗಳೂ ದೇವಿಯ ದರ್ಶನಕ್ಕೆ

ಬಂದು ಮಾತೃತೀರ್ಥದಲ್ಲಿ ಸ್ನಾನಮಾಡಿ ದೇವಿಯ ದರ್ಶನತಕ್ಕೊಂಡು ಪರಮಾನಂದಪಟ್ಟವು. ಆದರೆ ತ್ರಿಲೋಕಪಾಲನಾದ ವಿಷ್ಣು ವಾಸ ಮಾಡಿದ ದೇವಿಯ ಗರ್ಭವು ಎಷ್ಟು ಸುಖಕರವಾಗಿರುವದೋ ನೋಡ ಬೇಕೆಂದು ವೇದಗಳು ರೇಣುಕಾದೇವಿಯ ಗರ್ಭದೊಳಗೆ ಹೊಕ್ಕು ನೋಡಲು, ಹದಿನಾಲ್ಕು ಲೋಕಗಳು ತೋರಲಾಗಿ ಪರಮಾನಂದ ಪಟ್ಟು, ಸತ್ಯ ಲೋಕದಕ್ಕಿಂತಲೂ ನಮಗೆ ಇಲ್ಲಿಯೇ ಪರಮಸುಖವಾಗು ವದು, ನಾವು ಇಲ್ಲಿಯೇ ವಾಸಮಾಡೋಣವೆಂದು ನಿಶ್ಚಯಿಸಿ ಅಲ್ಲಿಯೇ ನಿಂತು ಬಿಟ್ಟವು. ಇತ್ತ ಸತ್ಯಲೋಕದಲ್ಲಿ ಬ್ರಹ್ಮದೇವನು ವೇದಗಳನ್ನು ಕಾಣದೆ ಚಿಂತಾಕ್ರಾಂತನಾಗಿ ವಿಷ್ಣುವಿನ ಕಡೆಗೆ ಹೋಗಿ ಈ ವರ್ತ ಮಾನ ತಿಳಿಸಲು ಸರ್ವಜ್ಞನಾದ ಹರಿಯು, ಎಲೈ ಬ್ರಹ್ಮನೇ ನೀನು ಏನೂ ಚಿಂತೆಮಾಡಬೇಡ, ವೇದಗಳು ಎಲ್ಲಿಯೂ ಹೋಗಿಲ್ಲ. ಜಗಜ್ಜ ನನಿಯಾದ ರೇಣುಕಾದೇವಿಯ ಗರ್ಭದೊಳಗೆ ಪರಮಾನಂದದಿಂದ ಇರುತ್ತವೆ. ನೀನು ಆ ಸರ್ವೇಶ್ವರಿಯ ಬಳಿಗೆ ಹೋಗಿ ಪ್ರಾರ್ಥನೆಮಾಡಿ ಕೊಂಡರೆ ಅವುಗಳನ್ನು ಕೊಡುವಳೆಂದು ಹೇಳಿದನು. ಅದೇ ಪ್ರಕಾರ ಬ್ರಹ್ಮನು ರೇಣುಕಾದೇವಿಯ ಕಡೆಗೆ ಬಂದು, ಮಾತೃತೀರ್ಥದಲ್ಲಿ ಸ್ನಾನ ಮಾಡಿ ಭಯಭಕ್ತಿಯಿಂದ ಜಗದಾಂಬೆಯನ್ನು ಪೂಜಿಸಿ ಅನೇಕ ಪ್ರಕಾರ ವಾಗಿ ಸ್ತವನಮಾಡಿದನು. ಆಗ ದೇವಿಯು ಅವನ ಇಚ್ಛೆಯನ್ನರಿತು ಆಕಳಿಸಲು ಮುಖದೊಳಗಿಂದ ವೇದಗಳು ಹೊರಗೆ ಬಂದುವು. ಬ್ರಹ್ಮ ದೇವನು ಆನಂದದಿಂದ ಅವುಗಳನ್ನು ತೆಗೆದುಕೊಂಡು ದೇವಿಗೆ ನಮ ಸ್ಕರಿಸಿ ಹೊರಟುಹೋದನು.

ಸುರನರರೆಲ್ಲರ ದುಃಖವ । ಪರಿಹರಿಸುತ್ತತುಲಸುಖ ॥
ವನೀಯುವ ಗೋಸುಗ । ಧರೆಯೋಳ್ ರೇಣುಕೆನಾಮದಿ ॥
ಭರದಿಂ ಜನಿಸಿರ್ದ ಗೌರಿಯೇ ಪೊರೆ ನಮ್ಮ ॥

ಎಲ್ಲರಿಗೆ ಜನನಿಯೆನಿಸುತೆ । ಸಲ್ಲೀಲೆಯೊಳಖಿಳ ॥
ರಂ ಪೊರೆಯುತಿರ್ಪುದರಿಂ । ದೆಲ್ಲಮ್ಮನೆಂಬ ನಾಮ ॥
ವು ಸಲ್ಲುವದೆಲೆ ತಾಯಿ ರೇಣುಕೇ ಸಿನಗನಿಶಂ ॥



ಶ್ರೀ ಬ್ರಹ್ಮದೇವರು ಶ್ರೀ ರೇಣುಕಾದೇವಿಗೆ ಪ್ರತ್ಯಕ್ಷವಾದದ್ದು




ಪರಶುರಾಮನು ೨೧ ಸಾರೆ ಕ್ಷತ್ರಿಯ ವಂಶವನ್ನು ನಿರ್ಮೂಲಮಾಡಿ
ಉಗರಗೊಳ್ಳದ ಶ್ರೀ ಎಲ್ಲಮ್ಮ ಗಿರಿಯಲ್ಲಿ ಶ್ರಮವನ್ನು ನಿವಾರಿಸಿಕೊಳ್ಳುವದು

ಓಂ ಶ್ರೀ ಸಚ್ಚಿದಾನಂದ ವಿವೆಕ್ತಿ
ಓಂ ಶ್ರೀ ಆದಿಶಕ್ತಿ ಆದಿಮಾಯಾ ||೧||
ಓಂ ಶ್ರೀ ಜಗದ್ರೂಪಿ ಜಗಜ್ಜನನಿ
ಓಂ ಜಗತ್‌ಮಾಜಿ ಜಗದಂಬಾ ||೨||
ಓಂ ಅದಿತಿದೇವಿ ಏಕವೀರಾ
ಓಂ ಯಜ್ಞಕುಂಡೋದ್ಭವಿ ಶ್ರೀ ಯಲ್ಲಮ್ಮಾ ||೩||

ಈ ಸ್ವರೂಪಳಾದ ಶ್ರೀ ರೇಣುಕಾದೇವಿಯವರು ಸರ್ವರಿಗೂ ಆಯುಷ್ಯ ಆರೋಗ್ಯ ಸದ್ಗುಣಿ ಪುತ್ರ ಪೌತ್ರಾದಿ,ಶ್ರೀ ದೇವೇಂದ್ರನಂತೆ ಅಷ್ಟೈಶ್ವರ್ಯ ಸುಖಸಂಪತ್ತು, ಶ್ರೀ ಜನಕ ಮಹಾರಾಜನಂತೆ ಭೋಗ,ಜ್ಞಾನ ಮೋಕ್ಷ ವನ್ನು ದಯಪಾಲಿಸಲಿ.

ಓಂ ಶಾಂತಿಃ ಓಂ ಶಾಂತಿಃ ಓಂ ಶಾಂತಿಃ

---

# ದೇವೀ ಮಂಗಳಾರತಿ

ಕಾಶೀನಿವಾಸ ಗುರು ವಿಶ್ವಾವಾಧ್ಯಪಾಹಿ || ಎಂಬಂತೆ

ದೇವಿಗೆ ಬೆಳಗುವೆ। ಮಂಗಳಾರತೀಯನು ಮಂಗಳಾರತೀಯ ||ಪಲ್ಲ||
ರೇಣುಕರಾಜನ ಯಜ್ಞದಿ ಜನಿಸಿದ।
ರೇಣುಕಾಂಬೆಗೆ ಶುಭ। ಮಂಗಳಾರತೀಯನು ||೧||
ಜಮದಗ್ನಿ ಪತ್ನಿಗೆ। ಶಮದಮ ಯುಕ್ತೆಗೆ।
ಕಮಲನೇತ್ರೆಗೆ ಶುಭ। ಮಂಗಳಾರತೀಯನು ||೨||
ಮಂಗಲ ಸದನೆಗೆ। ಮಂಗಲ ಗಾತ್ರೆಗೆ।
ಮಂಗಲಮಯಳಿಗೆ। ಮಂಗಳಾರತೀಯನು ||೩||

---

# ಶ್ರೀ ಕಶ್ಯಪ ಋಷಿಯ ವಂಶಾವಳಿ

ಶ್ರೀ ಬ್ರಹ್ಮ ದೇವರು

ಶ್ರೀ ಕಶ್ಯಪ ಋಷಿ

ಶ್ರೀ ವರುಣ ಋಷಿ

ಶ್ರೀ ಭೃಗು ಋಷಿ

ಶ್ರೀ ಚ್ಯವನ ಋಷಿ

ಶ್ರೀ ಋಚೀಕ ಋಷಿ

ಶ್ರೀ ಜಮದಗ್ನಿ ಋಷಿ

| ಶ್ರೀ ವಸು (ಅಗ್ನಿ ಅಂಶ) | ಶ್ರೀ ವಿಶ್ವಾವಸು (ವಾಯು ಅಂಶ) | ಶ್ರೀ ಬೃಹದ್ಭಾನು (ಸೂರ್ಯ ಅಂಶ) | ಶ್ರೀ ಬೃಹತ್ಕಣ್ವ (ಇಂದ್ರ ಅಂಶ) | ಶ್ರೀ ಪರಶುರಾಮ (ವಿಷ್ಣು ಅಂಶ) | ಶ್ರೀ ತ್ರಿಕುಲಾದೇವಿ (ರೇಣುಕಾದೇವಿಯ ಮಾನಸಪುತ್ರಿ) |
|---|---|---|---|---|---|

ಶ್ರೀ ಕಶ್ಯಪ ಋಷಿಯ ವಂಶದಿಂದ ಬಂದ ಶ್ರೀ ಜಮದಗ್ನಿ ಋಷಿಯ ಮೂಲ ವಂಶಜರಾದ ಶ್ರೀ ತೃಪ್ತ ಋಷಿ, ಶ್ರೀ ಗೂಢ ಋಷಿ, ಶ್ರೀ ಪರುಷ ಋಷಿ, ಶ್ರೀ ಲಿಂಗ ಋಷಿಗಳೆಂಬವರೇ ಶ್ರೀ ರೇಣುಕಾದೇವಿಯ ಅರ್ಚಕರಾಗಿರುತ್ತಾರೆ.

ಓಂ ಸೋऽಹಂ ಸೋ ಓಂ

ಓಂ ನಮಃ ಶಿವಾಯ

ಓಂ ನಮಃ ಶ್ರೀರೇಣುಕಾಜಮದಗ್ನೇಶ್ವರಾಯ

ಓಂ ನಮಃ ಪರಶುರಾಮಾಯ





ಶ್ರೀಮತಿ ಲಕ್ಷ್ಮೀಬಾಯಿ ಕೋಂ. ಕೃಷ್ಣಪ್ಪಾ ಕರಡಿ.

ಸಾ. ಹುಬ್ಬಳ್ಳಿ.

# ಶ್ರೀ ರಾಮಶೃಂಗ ಕ್ಷೇತ್ರದಲ್ಲಿ ಶ್ರೀ ರೇಣುಕಾದೇವಿ(ಶ್ರೀ ಎಲ್ಲಮ್ಮಾ)ಯು ಪರಿವಾರದ ದೇವತೆಗಳು

(೧) ಶ್ರೀ ರೇಣುಕಾದೇವಿಯು (ಶ್ರೀ ಎಲ್ಲಮ್ಮಾ)
(೨) ಶ್ರೀ ಜಮದಗ್ನಿ ದೇವರು.
(೩) ಶ್ರೀ ಪರಶುರಾಮ ದೇವರು.
(೪) ಶ್ರೀ ದೇವಿಯ ಶಿಖರಾಂಬಿಕೆಯು.
(೫) ಶ್ರೀ ದೇವಿಯ ಪಾದದೇವತೆ.
(೬) ಶ್ರೀ ಬ್ರಹ್ಮದೇವರು.
(೭) ಶ್ರೀ ಛತ್ರಿದೇವ.
(೮) ಶ್ರೀ ದೇವಿಯ ವಾಹನ, ಸಿಂಹ.
(೯) ಶ್ರೀ ದೇವಿಯ ಗರುಡಗಂಬ.
(೧೦) ಶ್ರೀ ಮಾರ್ಖಂಡೇಶ್ವರ-
(೧೧) ಶ್ರೀ ಗೌತುಮ ಲಿಂಗ.
(೧೨) ಶ್ರೀ ಕಾಳಿಂಗ ಕೃಷ್ಣ.

(೨೬) ಶ್ರೀ ವೀರಭದ್ರ ದೇವರು.
(೨೭) ಶ್ರೀ ಅನ್ನಪೂರ್ಣಾದೇವಿ.
(೨೮) ಶ್ರೀ ಮಹಾಶೇಷ ದೇವರು.
(೨೯) ಶ್ರೀ ಕಾಮರತಿಯರು.
(೩೦) ಶ್ರೀ ಕಂಟಕ ದೇವಿ.
(೩೧) ಶ್ರೀ ಕವಡಿ ದೇವಿ.
(೩೨) ಶ್ರೀ ತಕ್ಷಕ ದೇವರು.
(೩೩) ಶ್ರೀ ಹುಡೇದ ಕರೆಮ್ಮ.
(೩೪) ಶ್ರೀ ಮಲ್ಲಿಕಾರ್ಜುನ.
(೩೫) ಶ್ರೀ ರಾಮಲಿಂಗ.
(೩೬) ಶ್ರೀ ಬಸವೇಶ್ವರ.
(೩೭) ಶ್ರೀ ಮಹಾಶೇಷ.
(೩೮) ಶ್ರೀ ಪರಶುರಾಮ ಗುರು ಗಣಪತಿ.

(೫೧) ಶ್ರೀ ಸಿದ್ಧ ಪಾದುಕ.
(೫೨) ಶ್ರೀ ಐರಾವತ.
(೫೩) ಶ್ರೀ ಗರುಡಸರ್ಪ.
(೫೪) ಶ್ರೀ ಗಂಧಬ್ರಹ್ಮ ದೇವರು.
(೫೫) ಶ್ರೀ ಹುರಕೆಲ್ಲಮ್ಮ.
(೫೬) ಶ್ರೀ ಕಜ್ಜೆಲ್ಲಮ್ಮ.
(೫೭) ಶ್ರೀ ಸಾಕ್ಷಿ ಗಣಪತಿ.
(೫೮) ಶ್ರೀ ಭಟ್ಟೀ ಕರೆಮ್ಮ.
(೫೯) ಶ್ರೀ ಅಜ್ಜಮ್ಮ ದೇವಿ.
(೬೦) ಶ್ರೀ ಗಂಧಬ್ರಹ್ಮ ದೇವರು.
(೬೧) ಶ್ರೀ ಬನ್ನಿ ಮಹಾಕಾಳಿ.
(೬೨) ಶ್ರೀ ಬ್ರಹ್ಮದೇವರು.
(೬೩) ಶ್ರೀ ಉಪಗೊಂಡ ಬಸವೇಶ್ವರ.

(೧೩) ಶ್ರೀ ತ್ರಿಕುಲಾದೇವಿ (ಸಂಕೆಲ್ಲಮ್ಮ.)
(೧೪) ಶ್ರೀ ಕಾಮಾಕ್ಷಿ } ತ್ರಿಕುಲಾದೇವಿಯ ದ್ವಾರದ ಮುಂಭಾಗದಲ್ಲಿ ಎಡಬಲ.
(೧೫) ಶ್ರೀ ಮೀನಾಕ್ಷಿ }
(೧೬) ಶ್ರೀ ಮೇಲುಪ್ಪರಿಗೆಯ ಕರೆಮ್ಮ.
(೧೭) ಶ್ರೀ ದುರ್ಗಾದೇವಿ.
(೧೮) ಶ್ರೀ ಕೇದಾರ ಲಿಂಗ.
(೧೯) ಶ್ರೀ ಮೈಲಾರ ಲಿಂಗ.
(೨೦) ಶ್ರೀ ಮಾರುತಿ ದೇವರು.
(೨೧) ಶ್ರೀ ಬೆನ್ನೆಲ್ಲಮ್ಮ.
(೨೨) ಶ್ರೀ ಜಲಾರಿದೇವಿ ( ಪಾದೋದಕ ದೇವಿ).
(೨೩) ಶ್ರೀ ದತ್ತಾತ್ರಯ ದೇವರು.
(೨೪) ಶ್ರೀ ತುಳಸೀದೇವಿ.
(೨೫) ಶ್ರೀ ಭದ್ರಕಾಳಿ.

(೩೯) ಶ್ರೀ ಮಾತೃತೀರ್ಥದೇವಿ (ಎಣಿಗೊಂಡ).
(೪೦) ಶ್ರೀ ಕಡ್ಲಿತೀರ್ಥದೇವಿ.
(೪೧) ಶ್ರೀ ಅರಿಷಿಣತೀರ್ಥದೇವಿ.
(೪೨) ಶ್ರೀ ಸಿದ್ಧೇಶ್ವರ ದೇವರು.
(೪೩) ಶ್ರೀ ಶಿವ, ಪರಶುರಾಮ.
(೪೪) ಶ್ರೀ ತುಳಸೀದೇವಿ.
(೪೫) ಶ್ರೀ ಜಡೀಕರೆಮ್ಮ (ತೋಟದ ಕರೆಮ್ಮ ).
(೪೬) ಶ್ರೀ ನಾಗಸಮೂಹ.
(೪೭) ಶ್ರೀ ಗಣಪತಿ.
(೪೮) ಶ್ರೀ ಕಾಮಧೇನು.
(೪೯) ಶ್ರೀ ಕಲ್ಪವೃಕ್ಷ.
(೫೦) ಶ್ರೀ ಚಿಂತಾಮಣಿ.

(೬೪) ಶ್ರೀ ಓಲೀಮರದ ಕರೆಮ್ಮ.
(೬೫) ಶ್ರೀ ಕಾಲಭೈರವ.
(೬೬) ಶ್ರೀ ಬಂಕೇಶ್ವರ.
(೬೭) ಶ್ರೀ ಮೌನೇಶ್ವರ.
(೬೮) ಶ್ರೀ ಮಾತಂಗಿ.
(೬೯) ಶ್ರೀ ಆಕಾಶಬ್ರಹ್ಮ ದೇವರು.
(೭೦) ಶ್ರೀ ಮಳೇಶ್ವರ.
(೭೧) ಶ್ರೀ ಮದಲಬಾವಿ ಕರೆಮ್ಮ.
(೭೨) ಶ್ರೀ ತಳದ ಕರೆಮ್ಮ.
(೭೩) ಶ್ರೀ ಸರಸ್ವತಿದೇವಿ.
(೭೪) ಶ್ರೀ ರಾಮಲಿಂಗೇಶ್ವರ.
(೭೫) ಶ್ರೀ ಸಿದ್ಧೇಶ್ವರ ದೇವರು.
(೭೬) ಶ್ರೀ ಜೋಗುಳಬಾವಿ ಸತ್ಯಮ್ಮ.

## ಶ್ರೀ ರಾಮಶೃಂಗ ಕ್ಷೇತ್ರದಲ್ಲಿಯ ದೀಪಸ್ತಂಬಗಳು

(೧) ಶ್ರೀದೇವಿಯ ಎಡಬಲದಲ್ಲಿ ಎರಡು ಸ್ತಂಬಗಳು.

(೨) ಆಕಾಶಬ್ರಹ್ಮನ ಬಲಭಾಗದಲ್ಲಿಯ ಸ್ತಂಬ.

(೩) ಎಣಿಗೊಂಡದ ಮೇಲಿನ ದೀಪಸ್ತಂಬ.

(೪) ಪರಶುರಾಮನ ಗುಡಿಯ ಹಿಂದಿನ ದೀಪಸ್ತಂಬ.

(೫) ಪರಶುರಾಮನ ಗುಡಿಯ ಎದುರಿನ ದೀಪಸ್ತಂಬ.

(೬) ಶ್ರೀ ಎಲ್ಲಮ್ಮನ ಗುಡಿಯ ಹಿಂದಿನ ದೀಪಸ್ತಂಬ.

---

## ಶ್ರೀ ರಾಮಶೃಂಗ ಕ್ಷೇತ್ರದಲ್ಲಿಯ ಗೊಳ್ಳ ವ ಪಂಚಕೋಶದ ವಿವರ

(೧) ಶ್ರೀ ರೇಣುಕಾ (ಎಲ್ಲಮ್ಮ) ದೇವಿ ಜೋಡುಕೊಳ್ಳ.

(೨) ಹೆಗ್ಗೊಳ್ಳ ಸಿದ್ದೇಶ್ವರಗೊಳ್ಳ (ನಖಪುರ).

(೩) ರಾಮಲಿಂಗೇಶ್ವರ ಕೊಳ್ಳ (ಬೆಡಸೂರ ಕೊಳ್ಳ).

(೪) ಕರ್ದಯೇಶ್ವರ ಕೊಳ್ಳ (ಯಡ್ರಾಂವಿ ಕೊಳ್ಳ).

(೫) ಸಂಗಮೇಶ್ವರ ಕೊಳ್ಳ (ಸವದತ್ತಿ ಹತ್ತರ).

(೬) ಏಕೇಶ್ವರನ ಕೊಳ್ಳ.

(೭) ಜೋಗೇಶ್ವರನ ಕೊಳ್ಳ.

---